# ಬೀಳಗಿ ತಾಲೂಕಿನ ಸ್ಥಳನಾಮಾಧ್ಯಯನ

(ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕ

**ಮಲ್ಲಿಕಾರ್ಜುನ ಎಂ. ಹಿರೇಮಠ**

ಮಾರ್ಗದರ್ಶಕರು :

**ಡಾ. ಸಾಂಬಮೂರ್ತಿ**

ಪ್ರವಾಚಕರು

ಕನ್ನಡ ಭಾಷಾಧ್ಯಯನ ವಿಭಾಗ






ಭಾಷಾ ನಿಕಾಯ

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

೨೦೦೮

# ಬೀಳಗಿ ತಾಲೂಕಿನ ಸ್ಥಳನಾಮಾಧ್ಯಯನ

(ಕನ್ನಡ ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಎಂ.ಫಿಲ್‌ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕ
**ಮಲ್ಲಿಕಾರ್ಜುನ ಎಂ. ಹಿರೇಮಠ**




ಮಾರ್ಗದರ್ಶಕರು:
**ಡಾ. ಸಾಂಬಮೂರ್ತಿ**
ಪ್ರವಾಚಕರು
ಕನ್ನಡ ಭಾಷಾಧ್ಯಯನ ವಿಭಾಗ



ಭಾಷಾ ನಿಕಾಯ
ಕನ್ನಡ ಭಾಷಾಧ್ಯಯಾನ ವಿಭಾಗ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ

೨೦೦೮

## ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಮಲ್ಲಿಕಾರ್ಜುನ ಎಂ. ಹಿರೇಮಠ ಇವರು, ಬೀಳಗಿ ತಾಲೂಕಿನ ಸ್ಥಳನಾಮಾಧ್ಯಯನ ಎಂಬ ಶೀರ್ಷಿಕೆಯ ಎಂ.ಫಿಲ್. ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವನ್ನು ಇಡಿಯಾಗಿಯಾಗಲೀ, ಬಿಡಿ ಲೇಖನಗಳಾಗಿಯಾಗಲೀ ಎಲ್ಲಿಯೂ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 6.10.2008

ಸ್ಥಳ: ವಿದ್ಯಾರಣ್ಯ



(ಡಾ. ಸಾಂಬಮೂರ್ತಿ)
ಮಾರ್ಗದರ್ಶಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩೨೭೬

## ಸಂಶೋಧಕರ ಪ್ರಮಾಣ ಪತ್ರ

ಬೀಳಗಿ ತಾಲೂಕಿನ ಸ್ಥಳನಾಮಾಧ್ಯಯನ ಎಂಬ ಶೀರ್ಷಿಕೆಯ ಎಂ.ಫಿಲ್. ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಪ್ರಾಧ್ಯಾಪಕರಾದ ಡಾ. ಸಾಂಬಮೂರ್ತಿಯವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ನನ್ನ ಸ್ವಂತ ಅಧ್ಯಯನದಿಂದ ಪ್ರಸ್ತುತ ಸಂಪ್ರಬಂಧವನ್ನು ಸಿದ್ಧಪಡಿಸಿದ್ದು, ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದೂ, ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲವೆಂದೂ ಪ್ರಮಾಣೀಕರಿಸುತ್ತೇನೆ.

ದಿನಾಂಕ: 6/10/08.
ಸ್ಥಳ: ವಿದ್ಯಾರಣ್ಯ.

(ಮಲ್ಲಿಕಾರ್ಜುನ ಎಂ. ಹಿರೇಮಠ)
ಸಂಶೋಧಕ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದ ಭಾಷಾಧ್ಯಯನ ವಿಭಾಗದಲ್ಲಿ ಎಂ.ಫಿಲ್. ಮಾಡಲು ಅನುವು ಮಾಡಿಕೊಟ್ಟ ಕುಲಪತಿಗಳು, ನನ್ನ ಗುರುಗಳಾದ ಡಾ. ಎ. ಮುರಿಗೆಪ್ಪನವರಿಗೆ, ಹಾಗೂ ಹಿಂದಿನ ಪ್ರಭಾರ ಕುಲಪತಿಗಳಾದ ಡಾ. ಕೆ.ವಿ.ನಾರಾಯಣ ಅವರಿಗೆ,

ವಿಶ್ವವಿದ್ಯಾಲಯದ ಪ್ರಭಾರ ಕುಲಸಚಿವರಾದ ಡಾ. ಹಿ.ಚಿ.ಬೋರಲಿಂಗಯ್ಯನವರಿಗೆ, ಹಿಂದಿನ ಕುಲಸಚಿವರಾದ ಶ್ರೀ ವಿ.ಶಂಕರ್ ಅವರಿಗೆ,

ಎಂ.ಫಿಲ್. ವಿಷಯದ ಆಯ್ಕೆ, ಮೂಲಭೂತ ಸಿದ್ಧತೆ, ಆಕರ ಗ್ರಂಥಗಳನ್ನು ಸೂಚಿಸಿ, ಸಂದೇಹಗಳನ್ನು ಪರಿಹರಿಸಿ, ಕರಡು ಪ್ರತಿಗಳನ್ನು ತಿದ್ದಿ ಆತ್ಮೀಯತೆಯಿಂದ ಮಾರ್ಗದರ್ಶನ ನೀಡಿದ ಕನ್ನಡ ಭಾಷಾಧ್ಯಯನ ವಿಭಾಗದ ಪ್ರವಾಚಕರು ಹಾಗೂ ಉಪ ಕುಲಸಚಿವರು ಆದ ಡಾ. ಸಾಂಬಮೂರ್ತಿ ಅವರಿಗೆ,

ಅಧ್ಯಯನದ ಮೊದಲಿನಿಂದಲೂ ಪೂರಕವಾದ ಸಲಹೆಗಳನ್ನು ನೀಡುತ್ತಾ, ಸಹಕಾರವನ್ನು ನೀಡಿದ ಅಧ್ಯಯನಾಂಗದ ನಿರ್ದೇಶಕರೂ, ಭಾಷಾಧ್ಯಯನ ವಿಭಾಗದ ಪ್ರಾಧ್ಯಾಪಕರೂ ಆದ ಡಾ.ಡಿ.ಪಾಂಡುರಂಗ ಬಾಬು ಅವರಿಗೆ,

ಕನ್ನಡ ಭಾಷಾಧ್ಯಯನ ವಿಭಾಗದಲ್ಲಿ ಸಂಶೋಧನೆಗೆ ಸಂಬಂಧಿಸಿದಂತೆ ಸೂಕ್ತ ಸಲಹೆ, ಸಹಕಾರ ನೀಡಿದ ವಿಭಾಗದ ಮುಖ್ಯಸ್ಥರಾದ ಡಾ. ಪಿ.ಮಹದೇವಯ್ಯನವರಿಗೆ, ಪ್ರವಾಚಕರಾದ ಡಾ. ಅಶೋಕ ಕುಮಾರ ರಂಜೇರೆ, ಹಸ್ತಪ್ರತಿ ವಿಭಾಗದ ಪ್ರಾಧ್ಯಾಪಕರಾದ ಡಾ. ವೀರೇಶ ಬಡಿಗೇರ ಹಾಗೂ ಡಾ.ಸುರೇಂದ್ರ ಮಾನೆಮಿ ಅವರಿಗೆ,

ಅಧ್ಯಯನದಲ್ಲಿ ಸಹಕರಿಸಿದ ಪ್ರಸಾರಾಂಗದ ಸಹಾಯಕ ನಿರ್ದೇಶಕರಾದ ಬಿ. ಸುಜ್ಞಾನಮೂರ್ತಿ ಹಾಗೂ ಕಲಾವಿದ ಶ್ರೀ ಕೆ. ಕೆ. ಮಕಾಳೆ ಅವರಿಗೆ.

ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿ ಆಕರ ಗ್ರಂಥಗಳನ್ನು ಅಧ್ಯಯನ ಮಾಡಲು ಅನುವು ಮಾಡಿಕೊಟ್ಟ ಗ್ರಂಥಾಲಯದ ಎಲ್ಲಾ ಅಧಿಕಾರಿಗಳಿಗೆ,

ಹೆತ್ತು, ಹೊತ್ತು ಸಾಕಿ ಸಲುಹಿದ ಪೂಜ್ಯ ಮಾತಾ ಪಿತಾಶ್ರೀಗಳಿಗೆ, ಸಹೋದರರಿಗೆ, ಬಾಳ ಸಂಗಾತಿಗೆ, ಸೊಸೆಯಂದಿರರಿಗೆ ಹಾಗು ಬಂಧು–ಬಾಂಧವರಿಗೆ

ಅಧ್ಯಯನದಲ್ಲಿ ಸಹಾಯ ಮಾಡಿದ ಎಂ.ಫಿಲ್. ಸಂಶೋಧಕರಾದ ಶಂಕರ್, ಎರಿಯಪ್ಪ, ಬಸವರಾಜ, ಗಂಗಪ್ಪ ಶ್ರೀಮತಿ ಲಾವಣ್ಯ, ಈಶ್ವರರಾವ್ ಗೋವಿಂದ, ಈಶ್ವರಗೌಡ ಹಾಗೂ ಪಿಎಚ್.ಡಿ. ಸಂಶೋಧಕರಾದ ವಾಗೀಶ್, ಕುಪ್ಪೇರಾವ್, ಶೇಖರಾಚಾರಿ ಉತ್ತಂಗಿ ವೀರೇಶ, ಹಾಗೂ ಭಾಷಾಧ್ಯಯನ ವಿಭಾಗದ ಸಹಾಯಕರಾದ ವೀರೇಶ ಹಾಗು ಮಾರಯ್ಯ ಅವರಿಗೆ,

ಅಧ್ಯಯನಕ್ಕೆ ಅನುವುಮಾಡಿ ಸಹಕಾರ ನೀಡಿದ ಬಸವೇಶ್ವರ ವಾಣಿಜ್ಯ ಮಹಾವಿದ್ಯಾಲಯದ ಪ್ರಾಚಾರ್ಯರಿಗೆ, ಎಲ್ಲಾ ಸಿಬ್ಬಂದಿ ವರ್ಗದವರಿಗೆ.

ಸಂಪ್ರಬಂಧವನ್ನು ಅಂದವಾಗಿ ಮುದ್ರಿಸಿದ ಇಂಟೈಡ್ ಗ್ರಾಫಿಕ್ಸ್, ಕಮಲಾಪುರ ಅವರಿಗೆ

ನನ್ನ ಬದುಕನ್ನು ರೂಪಿಸಿದ ಢವಳೇಶ್ವರ ಗ್ರಾಮದ ಜನತೆಗೆ ಹಾಗು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ಕೃತಜ್ಞತೆಗಳು.

೦೪ ಅಕ್ಟೋಬರ್ ೨೦೦೮

ವಿದ್ಯಾರಣ್ಯ

ಮಲ್ಲಿಕಾರ್ಜುನ ಎಂ. ಹಿರೇಮಠ

# ಬೀಳಗಿ ತಾಲೂಕಿನ ಸ್ಥಳನಾಮಾಧ್ಯಯನ

## ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಿತಿ, ವಿಧಾನ.

**ಪೀಠಿಕೆ**

ಮಾನವ ತನ್ನ ಅಲೆಮಾರಿ ಜೀವನವನ್ನು ಕೈಬಿಟ್ಟು ಪ್ರಕೃತಿಯನ್ನು ಪಳಗಿಸಿ ತನ್ನ ಬದುಕಿಗೆ ಒಗ್ಗಿಸಿಕೊಳ್ಳವುದು ಸಾಧ್ಯ ಎಂಬುದನ್ನು ಯಾವಾಗ ಮನಗಂಡನೋ, ಆಗ ಊರು ಹಳ್ಳಿಗಳ ಉಗಮವಾಯಿತು ಎನ್ನಬಹುದು. ನೆಲದೊಂದಿಗಿನ ಈ ಹೋರಾಟದ ಪ್ರಕ್ರಿಯೆಯಲ್ಲಿ ತಾನು ನೆಲೆಗೊಂಡ ಸ್ಥಳದ ಜೊತೆಗೆ ತನ್ನನ್ನು ತಾನು ತೊಡಗಿಸಿಕೊಂಡ, ಸಂಕೇತವಾಗಿ ಆ ಸ್ಥಳಕ್ಕೆ ಆತನು ಒಂದು ಹೆಸರು ಇಟ್ಟನು, ಆ ಸ್ಥಳವು ಅವನ ಬದುಕಿನಲ್ಲಿ ಹಾದು ಹೋದ ಕುರುಹಾಗಿ, ಒಂದು ಹೆಸರಾಗಿ ಉಳಿಯಿತು. ಕ್ರಮೇಣ ಅಲ್ಲಿ ಜನ ವಸತಿ ಇರಲಿ, ಇಲ್ಲದಿರಲಿ ಒಂದು ಜನಾಂಗ ಸಂತತಿಯನ್ನು ಹೊತ್ತ ಆ ಗುರುತು ಪಟ್ಟಿ ಹಾಗೆಯೇ ಬಳಕೆಯಾಗಹತ್ತಿತು, ಹಲವು ಜನಾಂಗಗಳ ಸ್ಮೃತಿ ಮತ್ತು ಅಭಿಮಾನಗಳನ್ನು ಶಾಶ್ವತವಾಗಿ ಬೆಸೆಯುವ ಸಂಸ್ಕೃತಿಯ ಒಂದು ಕೊಂಡಿಯೆನಿಸಿತು. ಆ ಕೊಂಡಿಯೇ ಸ್ಥಳನಾಮ.

ಇತ್ತೀಚಿನ ಸಂಶೋಧನೆಯಲ್ಲಿ ಸ್ಥಳನಾಮ ಅಧ್ಯಯನ ಮಹತ್ವವನ್ನು ಪಡೆದುಕೊಳ್ಳುತ್ತಿದೆ. ದೇಶ ವಿದೇಶಗಳಲ್ಲಿ ಹೆಚ್ಚಿನ ಪ್ರಾಶಸ್ತ್ಯ ದೊರೆಯುತ್ತಿದೆ, ಭಾರತದಲ್ಲಿಯೂ ಅಧ್ಯಯನಕ್ಕೆ ಹೆಚ್ಚಿನ ಗಮನ ಹರಿಸಿಲಾಗಿದೆ. ಕರ್ನಾಟಕದಲ್ಲಿ ಈ ಕ್ಷೇತ್ರದಲ್ಲಿ ಹೊಸ ಹೊಸ ಅಧ್ಯಯನಗಳು ಆರಂಭವಾಗಿವೆ. ಬೇರೆ ದೇಶಗಳಿಗೆ ಹೋಲಿಸಿದರೆ ಭಾರತವು ಇನ್ನೂ ಈ ಕ್ಷೇತ್ರದಲ್ಲಿ ಮುಂದುವರೆಯಬೇಕಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸ್ಥಳನಾಮಗಳ ಉಲ್ಲೇಖಗಳು, ಸ್ಥಳನಾಮ ವಿಜ್ಞಾನದ ಆರಂಭ ಅಧ್ಯಯನದ ವಿಧಿ-ವಿಧಾನಗಳ ವರ್ಗಿಕರಣ ಹಾಗೂ ಸ್ಥಳನಾಮಗಳ ವೈಶಿಷ್ಟ್ಯಗಳನ್ನು ಹಾಗೂ ಉದ್ದೇಶಗಳನ್ನು ಕುರಿತು ವಿವೇಚಿಸಲಾಗಿದೆ.

೧೯ ನೇ ಶತಮಾನದಿಂದೀಚೆಗೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ನಾಮ ವಿಜ್ಞಾನವು ವಿಶೇಷವಾಗಿ ಬೆಳೆಯುತ್ತಿದ್ದಂತೆ ವ್ಯಕ್ತಿ ಮತ್ತು ಸ್ಥಳಗಳನ್ನು ಕುರಿತು ಮಾಡಿರುವ ಅಧ್ಯಯನಕ್ಕೆ ಪ್ರಾಶಸ್ತ್ಯ ದೊರಕಿದೆ.

ಈ ನಾಮ ವಿಜ್ಞಾನದಲ್ಲಿ ಸ್ಥಳನಾಮ ಮತ್ತು ವ್ಯಕ್ತಿನಾಮವೆಂದು ಎರಡು ಭಾಗ ಮಾಡಬಹುದು, ಸ್ಥಳನಾಮಗಳನ್ನು ಪ್ರಾಕೃತಿಕ ಮತ್ತು ಸಾಂಸ್ಕೃತಿಕ ಎಂದು ವಿಭಜಿಸಲಾಗಿದೆ. ಈಗ ಸ್ಥಳನಾಮ ವಿಜ್ಞಾನವು ನಾಮ ವಿಜ್ಞಾನದ ಶಾಖೆಯಾಗಿ ಉಳಿದಿರದೆ, ಒಂದು ಪ್ರತ್ಯೇಕ ಅಧ್ಯಯನ ಕ್ಷೇತ್ರವಾಗಿದೆ.

ಗ್ರೀಕ್ ಭಾಷೆಯಲ್ಲಿ "Topos " ಎಂದರೆ ಸ್ಥಳಗಳು, 'Namos' ಎಂದರೆ ಹೆಸರುಗಳು ಆದುದರಿಂದ ಸ್ಥಳಗಳ ಹೆಸರುಗಳನ್ನು ಅಧ್ಯಯನ ಮಾಡುವ ವಿಜ್ಞಾನವೇ 'Toponomy' ಎಂದಾಯಿತು.

ಗುಡ್ಡ-ಬೆಟ್ಟ-ರಸ್ತೆಗಳು ಮುಂತಾದ ಭೂ ವಿವರಗಳನ್ನು ಅಧ್ಯಯನ ಮಾಡುವ ಶಾಸ್ತ್ರಕ್ಕೆ 'Topography' ಎಂದು ಹೆಸರು. "Topos" ಮೂಲತಃ ಭೂ ವಿವರಗಳನ್ನು ಸೂಚಿಸುವ ಅರ್ಥವನ್ನು ಹೊಂದಿದ್ದರೂ, ಇಲ್ಲಿ ಪಾರಿಭಾಷಿಕವಾಗಿ ಪ್ರಾಕೃತಿಕ ಮತ್ತು ಸಾಂಸ್ಕೃತಿಕ ವೈಲಕ್ಷಣಗಳೆರಡನ್ನೂ ಒಳಗೊಂಡಿದೆ. ಇಂತಹ ಭೌಗೋಳಿಕ ನಾಮ ಅಥವಾ ದೇಶನಾಮಗಳಿಗೆ ಪ್ರಾದೇಶಿಕ ಭಾಷೆಗಳಲ್ಲಿ "ಗ್ರಾಮನಾಮ" ಎಂಬ ಪದ ಪರ್ಯಾಯವಾಚಿಯಾಗಿ ಬಳಸಲಾಗಿದೆ. ಇಂಗ್ಲೀಶಿನಲ್ಲಿ 'Toponomy'ಎಂಬ ಪದಕ್ಕೆ 'ಸ್ಥಳನಾಮ ವಿಜ್ಞಾನ' ಎಂಬ ಹೆಸರು ಈಗ ನಿರ್ದಿಷ್ಟವಾಗಿದೆ. ಊರು, ಗ್ರಾಮ, ದೇಶ ಮುಂತಾದ ಪದಗಳಿಗೆ ಪಾರಂಪರಿಕವಾದ ಸೀಮಿತ ಅರ್ಥಗಳಿರುವುದರಿಂದ, ಉಳಿದ ಸಾಮುದಾಯಿಕ ಮಾನವ ನೆಲೆಗಳ ಅರ್ಥವನ್ನು ಅವು ಒಳಗೊಳ್ಳುವುದಿಲ್ಲ, ಆದುದರಿಂದ ಇಲ್ಲಿ ಹೊಸದಾಗಿ ಬಳಕೆಗೆ ಬಂದಿರುವ "ಸ್ಥಳನಾಮ" ಎಂಬ ಪದ ಹೆಚ್ಚು ಸಮರ್ಪಕವಾಗಿದೆ.

ಜಗತ್ತಿನಾದ್ಯಂತ ಭೂ ವೈಶಿಷ್ಟ್ಯದ ಮೇಲೆ ಹುಟ್ಟಿಕೊಂಡ ಸ್ಥಳನಾಮಗಳ ಸಂಖ್ಯೆ ಅಧಿಕವಾಗಿರುವುದನ್ನು ಅರ್ಥಮಾಡಿಕೊಳ್ಳಬೇಕು. ಸಾಂಸ್ಕೃತಿಕ ಅಂಶಗಳನ್ನು ಪ್ರತಿನಿಧಿಸುವ ಸ್ಥಳನಾಮಗಳ ಸಂಖ್ಯೆ ಕಡಿಮೆಯಷ್ಟೆ ಅಲ್ಲ, ಕಾಲಾನುಕ್ರಮಣಿಕೆಯಲ್ಲಿ ಮಾನವ ಶಾಸ್ತ್ರಿಯ ದೃಷ್ಟಿಯಿಂದ ಇಂಥ ಹೆಸರುಗಳು ಅರ್ವಾಚಿನವಾದುದು ಎಂಬುದನ್ನು ಲಕ್ಷಿಸಬೇಕು. ಆಯಾ ಜನ ಸಮುದಾಯವು ನೆಲೆನಿಂತ ಒಂದೊಂದು ಸ್ಥಳದ ವಿಸ್ತೀರ್ಣ, ಅಲ್ಲಿನ ಜನಸಂಖ್ಯೆ, ಮುಂತಾದ ಆಧಾರಗಳ ಮೇಲಿನಿಂದ ಅದನ್ನು ಒಂದು ಹಳ್ಳಿ, ಊರು-ಗ್ರಾಮ, ವಾಡ, ಪುರ, ನಗರ, ಪಟ್ಟಣ ಹೀಗೆ ಮುಂತಾಗಿ ಕರೆಯಲಾಗುತ್ತದೆ. ಇದರೊಂದಿಗೆ ಆಯಾ ಸ್ಥಳಕ್ಕೆ ಪ್ರಾಪ್ತವಾದ ಒಂದು ವಿಶಿಷ್ಟ ಘಟಕ ಸೇರಿಕೊಂಡು, ಪ್ರತಿಯೊಂದಕ್ಕೂ ಒಂದೊಂದು ಅಂಕಿತನಾಮಗಳು ಬರುತ್ತವೆ. ಇಂತಹ ನಿರ್ದಿಷ್ಟ ಹೆಸರಗಳುಳ್ಳ ಪದಗಳೇ ಸ್ಥಳನಾಮಗಳು.

ಇಂದು ಮಾನವನು ವಾಸಿಸುವ ಸಣ್ಣ ನೆಲೆಯಿಂದ ಆರಂಭಿಸಿ, ಅತಿ ದೊಡ್ಡ ವಸಾಹತುಗಳ ನೆಲೆಗಳ ಅರ್ಥವನ್ನು ಒಳಗೊಂಡಿರುತ್ತದೆ. ಸ್ಥಳನಾಮ ವಿಜ್ಞಾನವು ಅವುಗಳೆಲ್ಲದಕ್ಕೂ ವಿವರಣೆ, ವಿಧಾನಗಳನ್ನು ವ್ಯವಸ್ಥಿತವಾಗಿ ತಿಳಿಸಿಕೊಡುವುದು. "ಸ್ಥಳನಾಮಗಳ" ಅಧ್ಯಯನದಿಂದ ನಾವು ಆ ಪ್ರದೇಶದ ವೈಶಿಷ್ಟ್ಯತೆಯನ್ನು ತಿಳಿದುಕೊಳ್ಳಬಹುದು.

ಸ್ಥಳನಾಮಗಳ ಪಟ್ಟಿ ಕಡೆಗೆ ಕಣ್ಣಾಡಿಸಿದರೆ ಸಾಕು. ಒಂದೊಂದು ಸ್ವಾರಸ್ಯದ ಅಂಶ ಮನವರಿಕೆಯಾಗುತ್ತದೆ. ಅದೇನೆಂದರೆ ಸಾಂಸ್ಕೃತಿಕ ನಾಮಗಳ ಸಂಖ್ಯೆಗಿಂತ ಭೌಗೋಳಿಕ

ನಾಮಗಳ ಸಂಖ್ಯೆ ಗಣನೀಯವಾಗಿ ಹೆಚ್ಚಾಗಿರುವುದು. ಸ್ಥಳನಾಮಗಳ ಈ ವಿಶಿಷ್ಟ ಸ್ವಭಾವ ಕರ್ನಾಟಕಷ್ಟೇ ಸೀಮಿತವಾಗಿರದೆ ಜಾಗತಿಕ ಮಟ್ಟದಲ್ಲಿಯೂ ನಿಜವಾಗಿದೆ. ನಾಡಿನ ವೈವಿಧ್ಯಮೂರ್ಣ ಪ್ರಾಕೃತಿಕ ಲಕ್ಷಣಗಳ ದಾಖಲೆಯಾಗಿರುವ ಇಂಥ ಸ್ಥಳನಾಮಗಳು ಮಾನವ ಶಾಸ್ತ್ರೀಯವಾಗಿ ಕೂಡಾ ಮಹತ್ವ ಪಡೆದಿದೆ.

ಊರುಗಳಿಗೆ ಆಯಾ ಹೆಸರುಗಳು ಬರಬೇಕಾದರೆ ಏನಾದರೂ ಐತಿಹ್ಯಗಳು, ದಂತಕಥೆಗಳು, ಪುರಾಣಕಥೆಗಳು ಕಾರಣವಾಗಬಹುದು. ಅಲ್ಲಿನ ಮಣ್ಣು, ಕಲ್ಲು, ಪೈರು, ಗುಡ್ಡ ಹೊಳೆ, ಹಳ್ಳ ತೊರೆ, ಮುಂತಾದ ನೈಸರ್ಗಿಕ ಹಿನ್ನೆಲೆಯನ್ನು ಹೊಂದಿರಬಹುದು, ಹಾಗೂ ಯಾರಾದರೂ ರಾಜ, ರಾಣಿ, ಮಂತ್ರಿ ಧಾರ್ಮಿಕ ಮಹಾಪುರುಷರು ಅಲ್ಲಿ ಇದ್ದರೆ ಅಲ್ಲದೆ ಅವರ ಪ್ರಭಾವವಾಗಿದ್ದರೆ, ದೇವರ ಜಾತ್ರೆ, ಉತ್ಸವಗಳು, ವಿಶೇಷವಾಗಿ ನಡೆಯುತ್ತಿದ್ದರೆ, ಸಾಮಾನ್ಯವಾಗಿ ಇವೆಲ್ಲ ಆಯಾ ಊರುಗಳಿಗೆ ಹೆಸರು ಬರಲು ಕಾರಣವಾಗುತ್ತದೆ. ಊರುಗಳಿಗೆ ಹೆಸರುಗಳು ಇಂತವೆ ಬರುತ್ತವೆ ಎಂದು ಹೇಳಲಾಗುವುದಿಲ್ಲ, ಆದರೆ ಕೆಲವು ಕಾರಣಗಳನ್ನು ಗುರುತು ಮಾಡಬಹುದು. ಊರುಗಳಿಗೆ ಆಯಾ ಹೆಸರುಗಳು ಹೇಗೆ ಬಂದವು, ಎಂಬುದನ್ನು ಅಧ್ಯಯನ ಮಾಡಿದರೆ ಅಂದೊಂದು ರೀತಿಯಲ್ಲಿ ಆ ಊರಿನ ಹಿನ್ನೆಲೆಯನ್ನು ಸಂಸ್ಕೃತಿಯನ್ನು ತಿಳಿದುಕೊಂಡಂತಾಗುತ್ತದೆ. ಭಾಷಾ ದೃಷ್ಟಿಯಿಂದ ಅಧ್ಯಯನ ಮಾಡಿದಾಗಲಂತೂ ಆ ಊರಿನ ಹೆಸರಿನ ಮೂಲದ ಮೇಲೆ ಹೊಸ ಬೆಳಕು ಚೆಲ್ಲಿದಂತಾಗುತ್ತದೆ.

## ಸ್ಥಳನಾಮದ ಸ್ವರೂಪ

"ಕವಿರಾಜಮಾರ್ಗಕಾರ" ಕನ್ನಡನಾಡು 'ಕಾವೇರಿಯಿಂದ ಗೋದಾವರಿಯ'ವರೆಗೆ ಹರಡಿತ್ತು ಎಂದಿದ್ದಾನೆ. ಈ ಹೇಳಿಕೆಯನ್ನು ಪುಷ್ಟಿಗೊಳಿಸಲು ನಮಗೆ ಸಿಗುವ ಪ್ರಥಮ ಆಧಾರವೆಂದರೆ, ಮಹಾರಾಷ್ಟ್ರದ ಕನ್ನಡ ಶಾಸನಗಳಷ್ಟೇ ವಿಶ್ವಾಸನೀಯವಾದ ಇನ್ನೊಂದು ಆಕರವೆಂದರೆ ಇಲ್ಲಿನ ಸ್ಥಳನಾಮಗಳು. ಸ್ಥಳನಾಮಗಳು ಒದಗಿಸುವ ಸಾಂಸ್ಕೃತಿಕ ಮಾಹಿತಿ ಶಾಸನಗಳಷ್ಟೇ ವಿಶ್ವಾಸನೀಯವೆಂದು ಪರಿಗಣಿಸಲಾಗಿದೆ. ಶಾಸನಗಳಿಗಿಂತ ಪ್ರಾಚೀನವಾದವು ಈ ಸ್ಥಳನಾಮಗಳು. ಶಾಸನಗಳನ್ನು ಬರೆಯುವ ಮೊದಲೇ ಇವು ಬಳಕೆಯಲ್ಲಿದ್ದವು.

ಅವು ಸಾವಿರಾರು ವರ್ಷಗಳಿಂದ ಹಾಗೇಯೆ ಉಳಿದು ಬಂದಿರುತ್ತವೆ. ಸ್ಥಳನಾಮಗಳು ಆಯಾ ಸ್ಥಳದ ಗುರುತು ಪಟ್ಟಿಕೆಗಳಾಗಿರುವುದರಿಂದ ಅವು ಬದಲಾಗಲಾರವು. ಶಾಸನಾದಿ ಪ್ರಮುಖ ಚರಿತ್ರೆ ದಾಖಲೆಗಳು ಪೂರೈಸುವ ಮಾಹಿತಿಗಳನ್ನು ಇನ್ನಷ್ಟು ಪುಷ್ಟಿಗೊಳಿಸಬಲ್ಲ ಚೈತನ್ಯ ಸ್ಥಳನಾಮಗಳಿಗಿವೆ. ಒಂದು ಪ್ರದೇಶದ ಸಾಂಸ್ಕೃತಿಕ ಅಧ್ಯಯನದ ಸಂದರ್ಭದಲ್ಲಿ ಈ ಸ್ಥಳನಾಮಗಳು ಗಮನಾರ್ಹವಾದ ಪಾತ್ರವನ್ನು ವಹಿಸುತ್ತವೆ. ಧರ್ಮ, ಸಂಸ್ಕೃತಿಗೆ ಕುರುಹುಗಳನ್ನು ಅವು ಎತ್ತಿ ತೋರಿಸುತ್ತವೆ. ಇತಿಹಾಸ, ಪುರಾಣ, ಧರ್ಮ, ಸಂಸ್ಕೃತಿ ಅಷ್ಟೇ ಅಲ್ಲ, ಊರ ಹೆಸರುಗಳಿಂದ ನೆಲದ ಮಹತ್ವ ತಿಳಿದುಬರುತ್ತದೆ. ಮಳೆ, ಬೆಳೆ, ಭೂಮಿಯ ಗುಣ, ಬಣ್ಣ , ಅಲ್ಲಿಯ ಪ್ರಾಣಿ, ವನಸ್ಪತಿಗಳು, ಖನಿಜಗಳು, ಕಾಡು ಮೇಡುಗಳು, ಹೊಳೆಕೆರೆ, ಅಟ್ಟೆ ಮೊದಲಾದ ಇರುವನ್ನು ಊರ ಹೆಸರುಗಳಿಂದ ಅರಿತುಕೊಳ್ಳಬಹುದು.

ಭಾರತದಲ್ಲಿ ಅನೇಕ ಸ್ಥಳನಾಮಗಳು ಅನ್ಯ ಸಂಸ್ಕೃತಿ ಮತ್ತು ಭಾಷಾ ಪ್ರಭಾವಗಳಿಂದ ಅನೇಕ ರೂಪಾಂತರಗಳಿಂದ ಪಡೆದಿವೆ. ಅವುಗಳ ಪ್ರಮಾಣೀಕರಣ ರೂಪಗಳನ್ನು ನಿರ್ಣಯಿಸುತ್ತದೆ. ಅವುಗಳಿಗೆ ಒಂದು ನಿರ್ಣಾಯಕ ರೂಪವನ್ನು ಕೊಡುವಾಗ ಅಂಚೆ, ಸಾರಿಗೆ, ಮುಂತಾದವುಗಳಲ್ಲಿ ಉಂಟಾಗುವ ಸಮಸ್ಯೆಗಳನ್ನು ಸುಲಭವಾಗಿ ನಿವಾರಿಸಬಹುದು. ಮಾನವನು ತನ್ನ ಅಲೆಮಾರಿ ಜೀವನವನ್ನು ಬಿಟ್ಟು ಸಾಮುದಾಯಿಕವಾಗಿ ಒಂದೆಡೆ ನೆಲೆ ನಿಲ್ಲುತ್ತಾ ಬಂದಂದಿನಿಂದ ಆಯಾ ಸ್ಥಳಗಳಿಗೆ ಅಂಕಿತನಾಮಗಳನ್ನು ಕೊಡುತ್ತಾ ಬಂದಿದ್ದಾನೆ. ಕೇವಲ ಇತಿಹಾಸ ಅಥವಾ ಭಾಷಾ ಶಾಸ್ತ್ರಗಳ ಸಹಾಯದಿಂದ ಸೀಮಿತ ಅವಧಿಯವರೆಗಿನ ಚರಿತ್ರೆಯನ್ನು ತಿಳಿದುಕೊಳ್ಳಬಹುದು, ಆದರೆ ಈ ಸ್ಥಳನಾಮಗಳ ಅಧ್ಯಯನದಿಂದ ಅದರಾಚೆಯ ಯುಗದ ಚರಿತ್ರೆಯನ್ನು ತಿಳಿಯಲು ಸಾಧ್ಯವಾಗುತ್ತದೆ.

ಸ್ಥಳನಾಮ ಅಧ್ಯಯನದಿಂದ ಅವರ ನಾಗರಿಕತೆ, ಸಂಸ್ಕೃತಿ, ಭಾಷೆ, ನಂಬಿಕೆ ಮೊದಲಾದ ವಿಷಯಗಳ ಮೇಲೆ ಹೊಸ ಬೆಳಕು ಚೆಲ್ಲುವುದು ಸಾಧ್ಯವಿದೆ ಎಂಬುದನ್ನು ಅರಿತುಕೊಂಡರೆ, ಈ ಸ್ಥಳನಾಮ ಅಧ್ಯಯನದ ಅಗತ್ಯ ಮತ್ತು ಮಹತ್ವ ತಿಳಿಯಬಹುದು. ಸ್ಥಳನಾಮಗಳು ಗತಕಾಲದ ಇತಿಹಾಸವನ್ನು ವರ್ತಮಾನದಲ್ಲಿ ಬಿಂಬಿಸುವ ಕೆಲಸವನ್ನು ಮಾಡುತ್ತವೆ. ಒಂದು ಪ್ರದೇಶದಲ್ಲಿ ಸಮುದಾಯ ಕಟ್ಟಿಕೊಂಡು ಬದುಕಿ ಬಾಳಿದ ಜನಾಂಗಗಳ ಕತೆಯನ್ನು ಈ ಸ್ಥಳನಾಮಗಳು ಹೇಳುತ್ತವೆ. ಕನ್ನಡ ನಾಡಿಗೆ ಬಹು ಪ್ರಾಚೀನತೆ ಹಾಗೂ ಸುದೀರ್ಘವಾದ ಐತಿಹಾಸಿಕ ಹಿನ್ನೆಲೆ, ಸಾಂಸ್ಕೃತಿಕ ಪರಂಪರೆ ಇದೆ ಎನ್ನುವುದನ್ನು ಈ ಸ್ಥಳನಾಮಗಳು ಖಚಿತಪಡಿಸುತ್ತವೆ.

**ಸ್ಥಳನಾಮಗಳ ಸ್ವರೂಪ ಮತ್ತು ವಿವೇಚನೆ :**

ಪ್ರಾಚೀನ ಕಾಲದ ವೈಯಾಕರಣಿಗಳು ಹಾಗೂ ಕೋಶ ವಿಜ್ಞಾನಿಗಳು ಒಂದು ಭಾಷೆಯ ಪದಗಳನ್ನು ಆಯಾ ಭಾಷಾ ರಚನೆ ಮತ್ತು ಅರ್ಥ ಪರಂಪರೆಯನ್ನು ಅನುಸರಿಸಿ ವರ್ಗೀಕರಿಸುತ್ತಾರೆ. ಒಂದೊಂದು ಭಾಷೆಯ ಪದಗಳು ಒಂದೊಂದು ವಿಧದ ವ್ಯವಸ್ಥೆ ಹೊಂದಿರುತ್ತದೆ. ಆದ್ದರಿಂದ ವರ್ಗೀಕರಣ ಪದ್ಧತಿಯು ಒಂದು ಭಾಷೆಯಿಂದ ಮತ್ತೊಂದು ಭಾಷೆಗೆ ಭಿನ್ನತೆಯನ್ನು ಹೊಂದಿರುತ್ತವೆ. ಭಾಷಾ ವ್ಯವಸ್ಥೆಯಲ್ಲಿ ನಾಮಪದಗಳದ್ದೇ ಒಂದು ದೊಡ್ಡ ಸಮುದಾಯವಿದೆ. ಸ್ಥಳನಾಮಗಳು ಸಹ ನಾಮಪದಗಳ ಒಂದು ಭಾಗವೇ ಆಗಿರುವುದರಿಂದ ವ್ಯಾಕರಣ ಹಾಗೂ ಭಾಷಾ ವಿಜ್ಞಾನದ ಅರ್ಥಾತ್ಮಕ ಮತ್ತು ರಚನಾತ್ಮಕ ಲಕ್ಷಣಗಳ ಮೇಲಿಂದಲೇ ಇವುಗಳ ಸ್ವರೂಪವನ್ನು ತಿಳಿಯಬಹುದು.

ನಾಮಪದಗಳಲ್ಲಿ Count-Nouns, Mass-Nouns ಮತ್ತು Proper-Nouns ಎಂಬ ಮೂರು ಉಪಗುಂಪುಗಳಿದ್ದು ಅವುಗಳಲ್ಲಿ ಸ್ಥಳನಾಮಗಳನ್ನು 'Proper Noun' ಎಂಬ ವರ್ಗಕ್ಕೆ ಸೇರಿಸಲಾಗಿದೆ. ಆಧುನಿಕ ಭಾಷಾ ವಿಜ್ಞಾನಿಗಳು ಈ ಪಾರಂಪರಿಕ ವರ್ಗೀಕರಣಕ್ಕಿಂತ ಪದಗಳನ್ನು ಅವುಗಳ ರಚನಾತ್ಮಕ ದೃಷ್ಟಿಯಿಂದಲೇ ವಿಭಜಿಸುವರು. ಪದಗಳ ರಚನಾತ್ಮಕ ಸ್ವರೂಪವನ್ನು ಅಧ್ಯಯನ ಮಾಡುವುದಕ್ಕಾಗಿಯೇ ಇದರಲ್ಲಿ ಆಕೃತಿಮಾಶಾಸ್ತ್ರ(Morphology) ಎಂಬ ಒಂದು ಪ್ರತ್ಯೇಕ ಶಾಖೆ ಇದೆ. ಈ ಮೇರೆಗೆ ಒಂದು ಪದವು ಪದರೂಪಾವಳಿಯಲ್ಲಿ(Paradigmatic Clause) ಹೊಂದುವ ಪ್ರತ್ಯಯಗಳನ್ನು ಅವಲಂಬಿಸಿ ಅದರ ವರ್ಗವನ್ನು ನಿಶ್ಚಯಿಸುವ ಪದ್ಧತಿ

ಈಗ ಸಾಮಾನ್ಯವಾಗಿದೆ. ಸ್ಥಳನಾಮಗಳು ಭಾಷಿಕ ರೂಪದಲ್ಲಿ ಇರುವುದರಿಂದ ಇವುಗಳ ಅಧ್ಯಯನಕ್ಕೆ ಭಾಷಾ ಶಾಸ್ತ್ರ ವಿಧಾನ ಸೂಕ್ತವೆನಿಸುತ್ತದೆ.

ದ್ರಾವಿಡ ಪರಂಪರೆಯಲ್ಲಿ ನಾಮಪದಗಳ ಹಂಚಿಕೆ ಭಿನ್ನವಾಗಿ ಕಂಡುಬರುತ್ತದೆ. ತಮಿಳಿನ "ತೊಲ್ಕಾಪ್ಪಿಯಂ" ದಲ್ಲಿ ತಮಿಳನಾಡು ಪ್ರದೇಶವನ್ನು ಕುರಿಂಜಿ, ಮಲೈ, ಮುರುದಮ್, ನೈದಲ್, (Hilly-Tract, Silyan-Tract, Arable, Tarct, Littoral Tract) ಎಂದು ನಾಲ್ಕು ಬಗೆಯಾಗಿ ವಿಂಗಡಿಸಲಾಗಿದೆ. ಈ ನಾಲ್ಕು ಭಾಗಗಳಲ್ಲಿ ಕ್ರಮವಾಗಿ ಸ್ಥಳನಾಮಗಳು ಕುರೂಚ್ಚಿ, ಪಾಡಿ, ಊರ್, ಪಾಕ್ಕಮ್, ಎಂಬ ವಾರ್ಗಿಕಗಳಿಂದ ಕೊನೆಗೊಳ್ಳುತ್ತದೆ.

ಕನ್ನಡ ಆಕೃತಿಮಾ ಹೊಂದಿದ ಸ್ಥಳನಾಮಗಳು ಅಥವಾ ಯಾವುದೇ ಭಾಷೆಯ ಸ್ಥಳನಾಮವಾಗಲಿ ಕನ್ನಡಕ್ಕೆ ಬಂದಾಗ ಅದು ಪದರೂಪಾವಳಿಯಲ್ಲಿ ಹೊಂದುವ ಪ್ರತ್ಯಯಗಳನ್ನು ಅನುಸರಿಸಿ ಅಮಾನವಿಕ ವರ್ಗಕ್ಕೆ ಸೇರುತ್ತದೆ. ಸ್ಥಳಗಳನ್ನು ಸೂಚಿಸುವ ಅಮಾನವಿಕ ವರ್ಗದ ಸಂಕ್ಷಿಪ್ತ ಪಟ್ಟಿಯನ್ನು ಮುಂದೆ ತಿಳಿಸಿದೆ.




ಸ್ಥಳನಾಮ ಪದಗಳು ಅಂತರಾಳದಲ್ಲಿ ಕಂಡು ಬರುವ ಘಟಕಗಳನ್ನು ಅರ್ಥಾತ್ಮಕ ಮತ್ತು ರಚನಾತ್ಮಕ ದೃಷ್ಟಿಯಿಂದ ವಿವರಿಸಿದೆ.

- ಸ್ಥಳನಾಮ ಪದಗಳು ಬೆಳವಣಿಗೆಯ ಮೂಲದಲ್ಲಿ ಸಾಮಾನ್ಯರ್ಥಕವಾದ ಊರು, ಕೇರಿ, ಪುರ, ವಾಡ, ಮುಂತಾದ ರೂಪದಲ್ಲಿದ್ದವು. ಇವುಗಳ ಸಂಖ್ಯೆ ಮತ್ತು ಆವರ್ತನೆಗಳು ಹೆಚ್ಚಾದಾಗ ಒಂದು ಊರನ್ನು ಇನ್ನೊಂದರಿಂದ ಪ್ರತ್ಯೇಕಿಸಿ ಹೇಳಬೇಕಾದ ಸಹಜವಾಗಿ ಪೂರ್ವದಲ್ಲಿ ಮತ್ತೊಂದು ಪದವು ಸೇರಿ ಅವುಗಳಿಗೆ ಪ್ರತ್ಯೇಕ ಅಂಕಿತಗಳು ಪ್ರಾಪ್ತವಾದವು.

- ಅರ್ಥದ ದೃಷ್ಟಿಯಿಂದ ಸ್ಥಳನಾಮಗಳು ಉತ್ತರ ಪದವು ಸಾಮಾನ್ಯರ್ಥ ಸೂಚಕವಾಗಿದ್ದು ಅದಕ್ಕೆ ಸೇರುವ ಪೂರ್ವ ಪದವು ಆಯಾ ಸ್ಥಳದ ಪ್ರಾಕೃತಿಕ ಇಲ್ಲವೇ ಸಾಂಸ್ಕೃತಿಕ ವೈಶಿಷ್ಟ್ಯ ಸೂಚಕವಾಗಿರುತ್ತದೆ.

- ಸ್ಥಳನಾಮಗಳಲ್ಲಿ ಸೇರುವ ಪೂರ್ವಪದವು ಆಯಾ ಸ್ಥಳನಾಮಕ್ಕೆ ವಿಶಿಷ್ಟವಾಗಿರುವುದು. ಕನ್ನಡದಲ್ಲಿ Specific ಎನ್ನುವುದಕ್ಕೆ 'ವಿಶಿಷ್ಟ' ಇಲ್ಲವೇ ನಿರ್ದಿಷ್ಟ ಎಂಬ ಪದವು 'Generic' ಎನ್ನುವುದಕ್ಕೆ ಸಾಮಾನ್ಯ ಇಲ್ಲವೇ ವಾರ್ಗಿಕ ಘಟಕ ಎಂಬ ಪಾರಿಭಾಷಿಕ ಪದಗಳು ಈಗ ರೂಢಿಯಾಗಿವೆ.

- ವಿಶಿಷ್ಟ ಘಟಕಗಳು ಪ್ರಸಾರ ಕ್ರಮದಲ್ಲಿ ಮುಕ್ತಶ್ರೇಣಿಗೆ ಸೇರಿವೆ ಆಯಾ ಪ್ರದೇಶದ ಪ್ರಾಕೃತಿಕ ಪರಿಸರ ಮತ್ತು ಸಂಸ್ಕೃತಿಯನ್ನು ಅವಲಂಬಿಸಿ ಅಲ್ಲಿಯ ಸ್ಥಳನಾಮಗಳಲ್ಲಿ ಇವು ಅಧಿಕ ಸಂಖ್ಯೆಯಲ್ಲಿ ಕಂಡು ಬರುತ್ತವೆ. ಒಂದೊಂದು ಸ್ಥಳನಾಮದಲ್ಲಿ ಒಂದಕ್ಕಿಂತ ಹೆಚ್ಚು ವಿಶಿಷ್ಟ ಘಟಕಗಳಿರಬಹುದು.

- ವಾರ್ಗಿಕ ಘಟಕಗಳು ಪ್ರಸಾರ ಕ್ರಮದಲ್ಲಿ ಮುಕ್ತಶ್ರೇಣಿಗೆ ಸೇರುತ್ತವೆ. ಯಾವುದೇ ಭಾಷೆಯಲ್ಲಿ ಇವುಗಳ ಸಂಖ್ಯೆ ಪರಿಮಿತವಾಗಿದ್ದು ಇವು ಆಯಾ ಸ್ಥಳನಾಮದ ತಿರಳನ್ನು ಸ್ಪಷ್ಟಗೊಳಿಸುತ್ತದೆ. ಒಂದು ಗುಂಪಿಗೆ ಸೇರಿದ ಅನೇಕ ಭಾಷೆಗಳಲ್ಲಿಯೂ ಅನೇಕ ವಾರ್ಗಿಕಗಳು ಸಾಮಾನ್ಯವಾಗಿ ಇಲ್ಲವೆ ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಬಳಕೆಯಾಗಬಹುದು.

ಸ್ಥಳನಾಮ ಪದದಲ್ಲಿಯ ಘಟಕಗಳಲ್ಲಿ ಯಾವುದು "ವಿಶಿಷ್ಠ ಘಟಕ" ಯಾವುದು "ವಾರ್ಗಿಕ ಘಟಕ" ಎನ್ನುವುದನ್ನು ಅವುಗಳ ಅವರ್ತನೆಯ ಪ್ರಮಾಣವನ್ನು ಅನುಸರಿಸಿ ನಿಶ್ಚಯಿಸಲಾಗುತ್ತದೆ. ಸಾಮಾನ್ಯವಾಗಿ ವಿಶಿಷ್ಟ ಘಟಕಗಳಿಗೆ ಆವರ್ತನೆಯ ಪ್ರಮಾಣವು ತೀರ ಕಡಿಮೆಯಾಗಿರುತ್ತದೆ. ಆದರೂ ಅವು ವಾರ್ಗಿಕಗಳಂತೆ ಹೆಚ್ಚಿನ ಆವರ್ತನೆ ಪಡೆಯಬಾರದೆಂಬ ನಿಯಮವೇನಿಲ್ಲ. ವಾರ್ಗಿಕ ಬರುವ ಕಡೆ ವಿಶಿಷ್ಟವು, ವಿಶಿಷ್ಟ ಬರುವ ಕಡೆ ವಾರ್ಗಿಕವೆನಿಸಬಹುದಾದ ಘಟಕಗಳು ಆವರ್ತನೆಯನ್ನು ಪಡೆಯಬಹುದು. ಇಂತಹ ಸಂದರ್ಭದಲ್ಲಿ ವಿಶಿಷ್ಟ ಘಟಕಗಳನ್ನು ವಾರ್ಗಿಕವೆಂತಲೂ ಕರೆಯಬಹುದು ಕೆಲವು ಸ್ಥಳನಾಮಗಳಲ್ಲಿ ವಾರ್ಗಿಕ ಘಟಕವು ಇಲ್ಲದೇ ಇರಬಹುದು, ಅದೇ ರೀತಿ ಕೆಲವು ಸ್ಥಳನಾಮಗಳಲ್ಲಿ ಅಲ್ಲಿಯ ವಾರ್ಗಿಕ ಘಟಕವೇ ಅಂಕಿತಾರ್ಥವನ್ನು ನೀಡುವಂತಿದ್ದರೆ ಅದನ್ನೆ ವಿಶಿಷ್ಟ ಘಟಕವೆಂದು ನಿರ್ಣಯಿಸಬೇಕಾಗುತ್ತದೆ.

**ಸ್ಥಳನಾಮ ಅಧ್ಯಯನ ಆರಂಭ ಮತ್ತು ಬೆಳವಣಿಗೆ.**

ಜಗತ್ತಿನಲ್ಲಿರುವ ಅನೇಕ ಸ್ಥಳನಾಮಗಳು ಹೇಗೆ ಹುಟ್ಟಿ ಬೆಳೆದು ಬಂದಿವೆ ಎಂಬುದನ್ನು ಹೇಳುವದು ಕಷ್ಟವಾದದ್ದು, ಆದರೆ ಇಂತಹ ಸ್ಥಳನಾಮಗಳ ಅಧ್ಯಯನ ಮಾಡಿದ ಫ್ರಾನ್ಸಿನ ವಿದ್ವಾಂಸ "ಗ್ರಾಟ್ ಫ್ರೈಡ್ ವಿಲಿಯಂ ಲಿಬ್ನಿಜ್"ನು ಕ್ರಿ.ಶ ೧೭೬೮ ರಲ್ಲಿ ಕೆಲವು ಲೇಖನಗಳನ್ನು ಪ್ರಕಟಿಸಿ. ಸ್ಥಳನಾಮಗಳ ಸಾಂಸ್ಕೃತಿಕ ಮಹತ್ವ ಮತ್ತು ಅವುಗಳ ಅಧ್ಯಯನದ ಅವಶ್ಯಕತೆಯನ್ನು

ಕುರಿತು ಮೊದಲಬಾರಿಗೆ ಪ್ರಸ್ತಾಪಿಸಿದನು. ಲಿಬ್ನಿಜ್‌ನು ಈ ಕೊಡುಗೆಯಿಂದಾಗಿ "ಸ್ಥಳನಾಮ ವಿಜ್ಞಾನದ ಪಿತಾಮಹ" ಎಂದು ಹೆಸರುವಾಸಿಯಾಗಿದ್ದಾನೆ.

ಐರೋಪ್ಯ ರಾಷ್ಟ್ರಗಳಲ್ಲೇ ಸ್ಥಳನಾಮದ ಅಧ್ಯಯನದ ಬಗ್ಗೆ ವಿಶೇಷ ಜಿಜ್ಞಾಸೆ ಮಾಡಿದುದು ೧೯ನೇ ಶತಮಾನದ ಮಧ್ಯಯುಗದಲ್ಲಿ. ಕ್ರಿಶ ೧೮೪೦ರಲ್ಲಿ ಫೋಯರ್ ಸ್ಯೆಮನ್ "Alt oeutches lemem Buch" ಎಂಬ ಗ್ರಂಥವನ್ನು ಪ್ರಕಟಿಸಿದನು. ಅನಂತರ ಐಸಾಕ್ ಟೇಲರ್‌ನ "Words and places" ಎಂಬ ಗ್ರಂಥ ಪ್ರಕಟಗೊಂಡಿತು. ಹೀಗೆ ಅಲ್ಲಲ್ಲಿ ಅನೇಕ ಲೇಖನಗಳು ಗ್ರಂಥಗಳು ಬೆಳಕಿಗೆ ಬರಲು ಪ್ರಾರಂಭಿಸಿದವು. ಕ್ರಿಶ ೧೮೭೧ ರಿಂದ ೧೮೮೫ರ ವರೆಗಿನ ಅವಧಿಯನ್ನು ಐರೋಪ್ಯ ರಾಷ್ಟ್ರಗಳಲ್ಲಿ ಸ್ಥಳನಾಮ ಅಧ್ಯಯನದ "ವಿಕಾಸಶೀಲ ಘಟ್ಟ" (Evolutinary period) ವೆಂದು ಕರೆಯಲಾಗಿದೆ. ಈ ಅವಧಿಯಲ್ಲಿ ಸ್ಥಳನಾಮ ಅಧ್ಯಯನಕ್ಕೆ ಭದ್ರಬುನಾದಿಯನ್ನು ಹಾಕಿ ಕೊಟ್ಟಿರುವ ವ್ಯಕ್ತಿ 'ಜಿ.ಜಿ.ಯಗ್ಲಿ' ಕ್ರಿಶ ೧೯೦೦ರ ಸುಮಾರಿಗೆ ಅನೇಕ ವಿಧಾನಗಳು, ತತ್ವಗಳು ರೂಪಗೊಂಡು, ಸ್ಥಳನಾಮಗಳ ವ್ಯವಸ್ಥಿತ ಅಧ್ಯಯನ ಆರಂಭವಾಯಿತು. ಅನಂತರ ಜಗತ್ತಿನ ಅನೇಕ ರಾಷ್ಟ್ರಗಳಿಗೆ ಈ ಅಧ್ಯಯನ ವ್ಯಾಪಿಸಿದೆ.

### ವಿದೇಶಿಯ ಅಧ್ಯಯನಗಳು

ಸ್ಥಳನಾಮ ಅಧ್ಯಯನವು ಶಾಸ್ತ್ರೀಯವಾಗಿ ಮೊದಲು ಪ್ರಾರಂಭವಾಗಿದ್ದು. ಐರೋಪ್ಯ ರಾಷ್ಟ್ರಗಳಲ್ಲಿ ಆದ್ದರಿಂದ ಸ್ಥಳನಾಮ ಅಧ್ಯಯನ ಉಗಮ ಮತ್ತು ವಿಕಾಸವನ್ನು ವಿದೇಶಿಯ ಮತ್ತು ಭಾರತೀಯ ಅಧ್ಯಯನಗಳೆಂದು ಎರಡು ಬಗೆಯಲ್ಲಿ ವಿಂಗಡಿಸಿಕೊಳ್ಳಬಹುದು. ಸರಕಾರಗಳು ವಿಶ್ವವಿದ್ಯಾಲಯಗಳು, ಸಂಘ-ಸಂಸ್ಥೆಗಳು ಇಂದು ಸ್ಥಳನಾಮ ಅಧ್ಯಯನವನ್ನು ಬೃಹತ್ ಪ್ರಮಾಣದಲ್ಲಿ ಯೋಜನೆಗಳನ್ನು ಹಾಕಿಕೊಂಡಿರುವುದರಿಂದ ಸ್ಥಳನಾಮ ಅಧ್ಯಯನವು ವಿಶಾಲವಾಗಿ ವ್ಯಾಪಿಸುತ್ತಿದೆ.

ಇಡೀ ಜಗತ್ತಿನಲ್ಲಿ ಸ್ಥಳನಾಮ ಅಧ್ಯಯನಕ್ಕೆ ಮುಂದೆ ಬಂದದ್ದು ಇಂಗ್ಲೆಂಡಿನ 'ಬ್ರಿಟೀಷ ಅಕಾಡೆಮಿ'. ಅಲ್ಲಿನ ಮೆಯರ್‌ರ ಪ್ರಯತ್ನದಿಂದ ಈ ಅಕಾಡೆಮಿ ಆಶ್ರಯದಲ್ಲಿ ಕ್ರಿಶ ೧೯೨೩ ರಲ್ಲಿ. "English Place Name Society" ಎಂಬ ಸಂಸ್ಥೆ ಜನ್ಮತಾಳಿತು. ಈ ಸಂಸ್ಥೆ ಇದುವರೆಗೆ ಸ್ಥಳನಾಮಗಳಿಗೆ ಸಂಬಂಧಿಸಿದ ಸುಮಾರು ೪೫ ಸಂಪುಟಗಳನ್ನು ಪ್ರಕಟಿಸಿದೆ. ನಂತರ ಕ್ರಿ.ಶ.೧೯೫೧ರಲ್ಲಿ "American Names Society" ಎಂಬ ಸಂಸ್ಥೆ ನ್ಯೂಯಾರ್ಕ್‌ನಲ್ಲಿ ಹುಟ್ಟಿಕೊಂಡಿತು.

ಆಕ್ಸ್‌ಫರ್ಡ ವಿಶ್ವವಿದ್ಯಾಲಯದಲ್ಲಿ ಸ್ಥಳನಾಮ ಅಧ್ಯಯನಕ್ಕಾಗಿ ಒಂದು ಪ್ರತ್ಯೇಕ ಶಾಖೆಯನ್ನು ತೆರೆಯಲಾಗಿದೆ. ಇದು "Dictionary of English Place Names" ಎಂಬ ಸ್ಥಳನಾಮ ಕೋಶವನ್ನು ಪ್ರಕಟಿಸಿದೆ. ಕ್ರಿ.ಶ.೧೯೪೯ ರಿಂದ ಈಚೆಗೆ ಯು.ಎನ್.ಓ (UNO)ದಲ್ಲಿ ಅಂತರಾಷ್ಟ್ರೀಯ ಸ್ಥಳನಾಮ ಅಧ್ಯಯನದ ಒಂದು ಶಾಖೆಯು ಆರಂಭಗೊಂಡಿದ್ದು, ಈ ವಿಭಾಗದ ಸಹಕಾರದಿಂದ ಇದುವರೆಗೆ ಸುಮಾರು ೧೨ ಅಂತಾರಾಷ್ಟ್ರೀಯ ಸ್ಥಳನಾಮ ಸಮ್ಮೇಳನಗಳು ಜರುಗಿವೆ ಹಾಗೂ ಎ.ಎಚ್ ಸ್ಮಿಥ್‌ರವರು ಬರೆದ "English Place Names"

ಗ್ರಂಥವನ್ನು ಕೇಂಬ್ರಿಜ್ ವಿಶ್ವವಿದ್ಯಾಲಯವು ಪ್ರಕಟಿಸಿದೆ ಮತ್ತು ಹಾರ್ಟಮ್ ಮತ್ತು ಸ್ಪೋರ್ಕರವರ "Standardisation Of Place Names" (೧೯೬೨) ಮುಂತಾದ ಮಹತ್ವದ ಕೃತಿಗಳಾಗಿವೆ.

ಇಂಗ್ಲೆಂಡಿನ ಎ.ಎಚ್.ಸ್ಮಿಥ್, ಲಾಂಗಮನ್ ಸ್ಮಿಥ್ ಅಮೇರಿಕೆಯ ಸ್ಟೀವರ್ಟ, ಗಾರ್ಡನರ್, ಆ್ಯಟ್ಲಿ ಜರ್ಮನಿಯ ಅಡಾಲ್ಪ, ಬ್ಯಾಟ್, ಫೊರ್ಸ್ಟಮನ್, ನಾರ್ವೆಯ ರೀನ್, ಸ್ವಿಡನ್ನಿನ ನಾರೀನ್ ಮುಂತಾದವರು ಸ್ಥಳನಾಮದ ಅಧ್ಯಯನಕ್ಕೆ ಮಹತ್ವ ಪೂರ್ಣ ಸೇವೆ ಸಲ್ಲಿಸಿದ್ದಾರೆ, ಫ್ರಾನ್ಸದೇಶದ ಸ್ಥಳನಾಮಗಳನ್ನು ಕುರಿತು ಅನೇಕ ವಿದ್ವಾಂಸರು ಸಂಶೋಧನೆಯಲ್ಲಿ ತೊಡಗಿದ್ದಾರೆ. ಹೀಗೆ ಸ್ಥಳನಾಮ ವಿಜ್ಞಾನಿಗಳ ಹೆಸರುಗಳು ಅಂತರಾಷ್ಟ್ರೀಯ ಮಟ್ಟದಲ್ಲಿ ಕೇಳಿಬರುತ್ತವೆ.

**ಭಾರತಿಯ ಅಧ್ಯಯನಗಳು.**

ಸ್ಥಳನಾಮಗಳು ಅತ್ಯಂತ ಪ್ರಾಚೀನ ಉಲ್ಲೇಖಗಳು, ಋಗ್ವೇದದಲ್ಲಿ ಬಳಸಿರುವ 'ರಾಷ್ಟ್ರ' ಪದವು ಸ್ಥಳನಾಮ ವಾಚಕಗಳಲ್ಲಿ ಮಹತ್ವದಾಗಿದೆ "ಪುರು" ಎಂಬುದು ಪುರನಿವಾಸಿ ವಾಚಕಗಳನ್ನು ಸೂಚಿಸುತ್ತದೆ. ಬ್ರಾಹ್ಮಣಗಳ ಕಾಲದಲ್ಲಿ 'ರಾಷ್ಟ್ರ' ಪದಕ್ಕೆ ಸಮಾನಾರ್ಥವಾಗಿ "ಜನಪದ" ಎಂಬ ಪದ ಬಳಕೆಯಾಗಿದೆ. ಗ್ರಾಮಗಳು ಈ ವಿಷಯಗಳ ಉಪ ವಿಧಾನವಾಗಿದ್ದು. ಒಂದೆಡೆ ನೆಲೆನಿಂತ ಜನ ಸಮುದಾಯಕ್ಕೆ ಈ ಗ್ರಾಮವೆಂಬ ಪದವನ್ನು ಬಳಸಲಾಗುತ್ತಿತ್ತು. "ಸಂಗ್ರಾಮ" ಎಂದರೆ ಮೂಲತಃ ಯುದ್ಧ ಮಾಡುವುದಕ್ಕಾಗಿ ಸಿದ್ಧವಾದ ಇಂತಹ ಸಮೂಹ ಎಂಬ ಅರ್ಥವೇ ಇತ್ತು. ಪ್ರತಿಯೊಂದು ಜನ ಪದವು ಒಂದು ರಾಷ್ಟವೆಂದು ಪರಿಗಣಿಸಿದ್ದು. ಅವುಗಳಿಗೆ ರಾಜಧಾನಿಯಲ್ಲಿ ಒಂದು ಪುರ ಇರುತ್ತಿತ್ತು. ಪಾಣಿನಿಯು 'ಗ್ರಾಮ' ಎಂಬ ಪದವನ್ನು ಒಂದು ಸ್ಥಳೀಯ ಜನಸಂಖ್ಯೆಯನ್ನೊಳಗೊಂಡ ಸ್ಥಳನಾಮ ವಾರ್ಗಿಕವೆಂಬ ಅರ್ಥದಲ್ಲಿ ಬಳಸಿದ್ದಾನೆ.

"ಅಮರಕೋಶ"ದಲ್ಲಿ ಮುಖ್ಯ ಪಟ್ಟಣ ಮತ್ತು ಅದರ ಬಡಾವಣೆಗಳನ್ನು ಕ್ರಮವಾಗಿ 'ಮುಖ್ಯನಗರ' ಮತ್ತು ಶಾಖಾನಗರ ಎಂದು ಸೂಚಿಸಿದೆ, ಇದರಲ್ಲಿ ಪುರ, ಪುರಿ, ನಗರಿ, ಪಟ್ಟಣ ಸ್ಥಾನೀಯ ಮತ್ತು ನಿಯಮಗಳನ್ನು ಸಮನಾರ್ಥಕವಾಗಿ ಭಾವಿಸಲಾಗಿದೆ "ವರಾಹಮಿಹಿರ"ನ "ಬೃಹತ್ಸಹಿಂತೆ"ಯ ೧೪ ಅಧ್ಯಾಯಗಳಲ್ಲಿ ಪ್ರಾಚೀನ ಭರತವರ್ಷದ ಅನೇಕ ಸ್ಥಳನಾಮಗಳ ದಾಖಲೆ ದೊರೆಯುತ್ತವೆ. 'ರಾಜ್ಯ' ಪದ ವೇದ ಮತ್ತು ಬ್ರಾಹ್ಮಣೋತ್ತರ ಕಾಲಗಳಲ್ಲಿ ಕಂಡುಬರುತ್ತವೆ. ಆದುದರಿಂದ ಗ್ರಾಮ, ಬಾಡ, ಖೇಡ, ಖರ್ವಡ, ವಡಂಬ, ಪತ್ತನ, ನಗರ, ದ್ರೋಣಾಮುಖಗಳು ಅಂದು ಸುರಕ್ಷಿತ ಬಗೆಯಲ್ಲಿ ಕಟ್ಟುತ್ತಿದ್ದು ಪುರ ನಿರ್ಮಾಣ ಪದ್ಧತಿಯನ್ನು ಕೂಡಾ ಸೂಚಿಸುತ್ತವೆ, ಈ ಪದಗಳು ಅನೇಕ ಕಡೆ ಪರ್ಯಾಯವಾಗಿಯೂ ಬಳಕೆಯಾಗಿವೆ. ಪುರಾಣ ಕಾಲದಲ್ಲಿಯೇ ಪ್ರಾಚೀನ "ವಾಹ್ಲಿಕ" (ಇಂದಿನ ಪಂಜಾಬ) ದೇಶಕ್ಕೆ ಸಂಬಂಧಿಸಿದಂತೆ ಗ್ರಾಮ ಮತ್ತು ನಗರ ಪದಗಳು ಯಾವುದೇ ಅಂತರವಿಲ್ಲದೆ ಬಳಕೆಯಾಗಿವೆ, ಸಂಸ್ಕೃತ ಮಹಾಕಾವ್ಯಗಳ "ಅಷ್ಟಾದಶ" "ಪುರ" ವರ್ಣನೆ ಒಂದು ಅಂಗವಾಗಿದೆ,

### ಕನ್ನಡದಲ್ಲಿ ಪ್ರಾಚೀನ ಉಲ್ಲೇಖಗಳು

ಡಾ. ಆರ್. ನರಸಿಂಹಾಚಾರ್ಯರು ಅಶೋಕನ ಶಾಸನದಲ್ಲಿ ಬರುವ 'ಇಸಿಲ್' ಪ್ರಾಚೀನತೆಯುಳ್ಳ ಕನ್ನಡ ಸ್ಥಳನಾಮ ಪದವಾಗಿದೆ ಎಂದು ಅಭಿಪ್ರಾಯ ಪಟ್ಟಿದಾರೆ. ಸಂಸ್ಕೃತ ಮಹಾಕಾವ್ಯಗಳ ಜಾಡಿನಲ್ಲಿ ಬಂದಿರುವ ಕನ್ನಡ ಕಾವ್ಯಗಳಲ್ಲಿಯು ಸ್ಥಳನಾಮಗಳ ಉಲ್ಲೇಖ ಮತ್ತು ಪುರವರ್ಣನೆಗಳು ಬಂದಿವೆ. ಪ್ರಾಚೀನ ಕನ್ನಡ ಗದ್ಯಕೃತಿಯಾದ 'ವಡ್ಡಾರಾಧನೆ'ಯಲ್ಲಿಯ ಕಥೆಗಳಲ್ಲಿ 'ಮೇರು ಪರ್ವತದ ದಕ್ಷಿಣ 'ದಿಗ್ಭಾಗದ' "ಜಂಬೂದ್ವೀಪ" ವನ್ನು ವಿವರಿಸಿ ಅಲ್ಲಿಯ ನಾಡು ಅಲ್ಲಿಯ ಪುರ ಅದನ್ನಾಳುವ ರಾಜನವರೆಗೆ ವಿವರಿಸಿ ನಿಜವಾದ ಕಥೆ ಪ್ರಾರಂಭಗೊಳಿಸುತ್ತದೆ. ಜೈನ ಮುನಿಗಳು 'ಗ್ರಾಮ' 'ನಗರ' 'ಖೇಡ' 'ಖರ್ವಡ' 'ವಡಂಬ' 'ಪತ್ತನ' ದ್ರೋಣಾಮುಖಗೋಳಾರ್ಯೆಸಿ ಹೋಗುತ್ತಾರೆ, ನಂಜುಂಡ ಕವಿಯು ರಾಮನಾಥ ಚರಿತ್ರೆಯಲ್ಲಿ ಗ್ರಾಮ, ನಗರ, ಖೇಡ, ಖರ್ವಡ ದುರ್ಗದ್ರೋಣಾಮುಖಂ ಸಂದೋಹದಿಂ ಕಾಮರಾಡುಂಬೋಲದಂತೆ ಕರ್ಣಾಕಟ ಭೂಮಿ "ಕಣ್ಣಸೆದಿರುತಬಹುದು" ಎಂದೂ ಹೇಳುತ್ತಾನೆ.

ಹರಿಹರಿನೂ ಕೂಡಾ ತನ್ನ ಶಿವಶರಣರ ರಗಳೆಗಳಲ್ಲಿ ಆಯಾ ಶರಣರ ದೇಶ,ನಾಡು ಗ್ರಾಮಗಳನ್ನು ಹೇಳುತ್ತಾನೆ. ಆ ಗ್ರಾಮದ ಐತಿಹಾಸಿಕ ವಿವರಗಳನ್ನು ಒದಗಿಸುತ್ತಾ "ಶಿವಪುರ" ಎಂದು ಹೇಳುತ್ತಾನೆ. ಲಕ್ಕಣ್ಣ ದಂಡೇಶನ "ಶಿವತತ್ವ ಚಿಂತಾಮಣಿ"ಯಲ್ಲಿಯೂ ಶರಣರ ಗ್ರಾಮ, ನಾಡು, ದೇಶಗಳ ಬಗ್ಗೆ ವಿವರಣೆ ದೊರೆಯುತ್ತದೆ.

ಹಲ್ಮಿಡಿ ಶಾಸನದಲ್ಲಿಯೇ "ಪಲ್ಮಿಡಿಯಂ" "ಮೂಳವಳ್ಳಿಉಂ" ಎಂಬ ಗ್ರಾಮಗಳ ಹೆಸರುಗಳು ಬಂದಿವೆ. ಕನ್ನಡದಲ್ಲಿಯೂ ಸ್ಥಳಪುರಾಣಗಳಾದ "ಕಾರ್ಕಳ ಚರಿತ್ರೆ" , "ಪಂಪಸ್ಥಾನ ವರ್ಣನಂ" "ಅರ್ಕಾವತಿ ಮಹಾತ್ಮೆ" "ಕಾವೇರಿ ಮಹಾತ್ಮೆ", "ಬನವಾಸಿ ಮಹಾತ್ಮೆ", "ಸೋರುಕೊಪ್ಪ ಮಹಾತ್ಮೆ" ಮುಂತಾದವು ಜೈನ, ಶೈವ–ವೀರಶೈವ ವೈಷ್ಣವ ಧರ್ಮಗಳ ಹಿನ್ನೆಲೆಯಲಿ ಬರೆಯಲ್ಪಟ್ಟಿವೆ. ಇದೇ ರೀತಿ ಜನವದಂತಿ, ಕೈಫಿಯತ್ತು ಮುಂತಾದವವುಗಳಲ್ಲಿಯೂ ಸ್ಥಳನಾಮಗಳ ಬಗ್ಗೆ ಕೆಲವು ಮಾಹಿತಿಗಳು ದೊರೆಯುತ್ತವೆ.

### ಸಾಂಘಿಕ ಪ್ರಯತ್ನಗಳು:

ಭಾರತದಲ್ಲಿ ಸ್ಥಳನಾಮಗಳ ಅಧ್ಯಯನಕ್ಕೆ ಮೊದಲು ಮುಂದೆಬಂದು ತ್ರಿವೆಂದ್ರಮದಲ್ಲಿಯ "ಡ್ರಾವಿಡಿಯನ್ ಲಿಂಗ್ವಿಸ್ಟಿಕ್ ಅಸೋಸಿಯನ್" ಎಂಬ ಸಂಸ್ಥೆಯ ಇದರ ಉದ್ದೇಶಗಳಲ್ಲಿ ಸ್ಥಳನಾಮಗಳ ಅಧ್ಯಯನ ಮತ್ತು ಚರ್ಚೆಗಳಿಗೆ ಪ್ರತ್ಯೇಕ ಅವಕಾಶ ಕಲ್ಪಿಸಿಕೊಟ್ಟಿದೆ.

ಭಾರತೀಯ ಶಾಸನ ಮತ್ತು ಪುರಾತತ್ವ ಇಲಾಖೆಯ ಮುಖ್ಯಸ್ಥ ಡಾ. ಕೆ.ವಿ. ರಮೇಶ, ಮಾಧವ ಎನ್. ಕಟ್ಟಿ ಮುಂತಾದವರು ದೇ.ಜವರೇಗೌಡ ಅವರ ಮಾರ್ಗದರ್ಶನದಲ್ಲಿ ಕ್ರಿ.ಶ. ೧೯೭೮ ರಲ್ಲಿ Indian Place Name Society" ಎಂಬ ಸಂಸ್ಥೆಯನ್ನು ಸ್ಥಾಪಿಸಿದ್ದಾರೆ. ಕೇರಳ, ತಮಿಳನಾಡು, ಆಂಧ್ರಪ್ರದೇಶ , ಕರ್ನಾಟಕ, ಮೇಘಾಲಯ, ಮುಂತಾದ ಕಡೆಗಳಲ್ಲಿ ಇತ್ತೀಚಿಗೆ ಇದರ ಶಾಖೆಗಳನ್ನು ತೆರೆಯಲಾಗಿದೆ. ಈ ಸಂಸ್ಥೆಯು ಪ್ರತಿವರ್ಷ ಒಂದೊಂದು ಕಡೆಯಲ್ಲಿ "ಅಖಿಲ ಭಾರತೀಯ ಸ್ಥಳನಾಮ ಸಮ್ಮೇಳನ" ಏರ್ಪಡಿಸುವ ಮೂಲಕ ಭಾರತೀಯ

ಸ್ಥಳನಾಮ ವಿಜ್ಞಾನಿಗಳನ್ನು (Toponomasticians) ಪರಸ್ಪರ ಸೇರುವುದಕ್ಕೆ ಅನುವು ಮಾಡಿಕೊಟ್ಟಿವೆ.

ಸ್ಥಳನಾಮ ಅಧ್ಯಯನಕ್ಕಾಗಿ ಮುಂದೆ ಬಂದ ಭಾರತೀಯ ವಿಶ್ವವಿದ್ಯಾನಿಲಯಗಳಲ್ಲಿ ತಿರುಪತಿಯ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯ ಶ್ಲಾಘನೀಯ ಸೇವೆ ಸಲ್ಲಿಸುತ್ತಾ ಇದೆ. ಹೈದ್ರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಈಶ್ವರ ಚರಣ ಮತ್ತು ಪಿ.ಮಾಣಿಕ ಪ್ರಭುಗಳ ನೇತ್ರತ್ವದಲ್ಲಿ ಸ್ಥಳನಾಮಾಧ್ಯಯನ, ತ್ರಿವೇಂದ್ರಂ ಕೇರಳ ವಿಶ್ವವಿದ್ಯಾಲಯದಲ್ಲಿ ಕೇರಳಕ್ಕೆ ಸಂಬಂಧಿಸಿದ ಹೆಚ್ಚು ಜಿಲ್ಲೆಗಳ ಅಧ್ಯಯನಗಳು ಪೂರ್ಣಗೊಂಡಿವೆ.

ಮೈಸೂರ ವಿವಿಯ ಡಾ. ಹಾ. ಮಾ ನಾಯಕ ಮತು ಬೆಂ.ವಿ.ವಿ.ಯ ಡಾ. ಎಂ.ಚಿದಾನಂದಮೂರ್ತಿ ಅವರ ಮಾರ್ಗದರ್ಶನದಲ್ಲಿ ನಡೆದ ಸ್ಥಳನಾಮ ಅಧ್ಯಯನಗಳಿಗೆ ಆಯಾ ವಿಶ್ವವಿದ್ಯಾಲಯಗಳಿಂದ ಪಿಎಚ್‌ಡಿ ಪದವಿ ದೊರಕಿವೆ. ಮಹಾರಾಷ್ಟ್ರ ಮತ್ತು ಕರ್ನಾಟಕ ಗಡಿ ಪ್ರದೇಶದ ಸುಮಾರು ನಾಲ್ಕು ಸಾವಿರ ಸ್ಥಳನಾಮಗಳ ಅಧ್ಯಯನ ಬೃಹತ್ ಸಂಶೋಧನೆ ಯೋಜನೆ(Major Research Project) ಒಂದನ್ನು ಮುಂಬಯಿ ವಿಶ್ವವಿದ್ಯಾಲಯ ಕೈಗೊಂಡಿದೆ.

ಭಾರತವು ಸ್ವತಂತ್ರವಾದ ಮೇಲೆ ರಾಜ್ಯ ಸರಕಾರಗಳ ಸಲಹೆಗಳ ಮೇರೆಗೆ ೧೯೫೩ರಲ್ಲಿ ಸ್ಥಳನಾಮಗಳ ಪ್ರಮಾಣಿತ ರೂಪಗಳನ್ನು ನಿಶ್ಚಯಿಸಲು ಕೆಲವು ನಿಯಮಾವಳಿಗಳನ್ನು ಹಾಕಿಕೊಂಡಿತ್ತು. ಈ ಮೇರೆಗೆ ನೈಸರ್ಗಿಕಸಂಪನ್ಮೂಲ ಮತ್ತು ರಕ್ಷಣಾ ಖಾತೆಗಳು ಒಟ್ಟುಗೂಡಿ ಅಂದಿಗೆ ಸರಿಯೆನಿಸಿದ ರೂಪಗಳನ್ನು ಪ್ರಮಾಣಿತ ರೂಪಗಳೆಂದು ನಿರ್ಣಯಿಸಿದವು. ಪುನಃ ನ್ಯಾಶನಲ್ ಅಟ್ಲಾಸ್ ಸಿದ್ದಪಡಿಸುವಲ್ಲಿ ಪ್ರಮಾಣಿತ ರೂಪಗಳ ಬಗ್ಗೆ ಭಿನ್ನಾಭಿಪ್ರಾಯಗಳ ಬಂದು ಕ್ರಿ.ಶ. ೧೯೬೧ರಲ್ಲಿ ಈ ಬಗ್ಗೆ ನಿರ್ಣಯ ಕೈಕೊಳ್ಳಲು "ಜಿಯೋಗ್ರಾಫಿಕಲ್ ನೇಮ್ಸ್ ಕಮಿಟಿ" ಭೂಪಟಗಳಿಗೆ ಸೇರಿಸಲಾಯಿತು. ಈಗ ಸ್ಥಳನಾಮ ಭಾಗವು ಭಾರತೀಯ ರಕ್ಷಣಾ ಖಾತೆಗೆ ಸೇರಿದೆ. ಭೂ ಸರ್ವೇಕ್ಷಣಾ ವಿಭಾಗವು ಅದಕ್ಕೆ ಅಧೀನವಾಗಿದ್ದು, ಸ್ಥಳನಾಮ ಪರಿಷ್ಕಾರವನ್ನು ಕುರಿತು ಅಧ್ಯಯನ ಮಾಡುತ್ತಿದೆ.

**ಅಧ್ಯಯನದ ಉದ್ದೇಶ**

ಬೀಳಗಿ ತಾಲೂಕಿನ ಸ್ಥಳಾನಾಮಾಧ್ಯಯನ ಇದು ಸಂಶೋಧನಾ ಸಂಪ್ರಬಂಧದ ಶೀರ್ಷಿಕೆಯಾಗಿದೆ. ಬೀಳಗಿಯು ಅತಿ ಹೆಚ್ಚು ಸ್ಥಳನಾಮವನ್ನು ಹೊಂದಿರುವ ತಾಲೂಕಾಗಿದೆ. ಬಾಗಲಕೋಟ ಜಿಲ್ಲೆಯ ಆರು ತಾಲೂಕಗಳಲ್ಲಿ ಬೀಳಗಿಯ ಇತಿಹಾಸ, ಸಾಂಸ್ಕೃತಿಕ ಮತ್ತು ರಾಜಕೀಯವಾಗಿ ಪ್ರಸಿದ್ಧಿಯಾಗಿರುವ ಪ್ರದೇಶವಾಗಿದೆ. ಹಿಂದೆ ಕಲ್ಯಾಣ ಚಾಲುಕ್ಯರ ಅರಸರಾದ ಜಗದೇಕಮಲ್ಲ (ಕ್ರಿ.ಶ. ೧೦೧೪) ೩ನೇ ಸೋಮೇಶ್ವರ (೧೦೨೫) ಅಲ್ಲದೆ ಆದಿಲ್‌ಶಾಹಿ ಮನೆತನದ ೨ನೆ ಇಬ್ರಾಹಿಂನ ಆಡಳಿತಕ್ಕೆ ಒಳಪಟ್ಟು ಹಲವಾರು ಗುರುತರ ಐತಿಹಾಸಿಕ, ರಾಜಕೀಯ, ಸಾಂಸ್ಕೃತಿಕ ಕೊಡುಗೆಗಳನ್ನು ನೀಡಿದೆ.

ಬೀಳಗಿ ಕೃಷ್ಣೆ ಮತ್ತು ಘಟಪ್ರಭೆಯರ ಮಡಿಲಲ್ಲಿರುವ ಬೀಳಗಿಯು ಬಾಗಲಕೋಟೆಗೆ ವಾಯುವ್ಯ ದಿಕ್ಕಿನಲ್ಲಿ ೩೦ಕಿ.ಮಿ ದೂರದಲ್ಲಿದೆ. ಈ ಪ್ರದೇಶವು ಹಿಂದೆ ಮುಂಬೈ-ಕರ್ನಾಟಕ ಪ್ರಾಂತದಲ್ಲಿದ್ದುದರಿಂದ, ಸುಲ್ತಾನ ಆಳ್ವಿಕೆಯ ಪ್ರಭಾವದಿಂದಾಗಿ ಮರಾಠಿ ಮತ್ತು ಉರ್ದುವಿನ ಪ್ರಭಾವ ಇಲ್ಲಿನ ಭಾಷೆಯ ಮೇಲೆ ಆಗಿದೆ.

ಬೀಳಗಿ ತಾಲೂಕಿನ ಸ್ಥಳನಾಮಗಳು ಒಂದಕ್ಕೊಂದು ಭಿನ್ನ ಹಾಗೂ ವಿಶಿಷ್ಟತೆಯಿಂದ ಕೂಡಿವೆ. ಹೀಗಿರುವ ಸ್ಥಳನಾಮಗಳ ನಿಷ್ಪತ್ತಿಗಾಗಿ ಅಧ್ಯಯನವನ್ನು ಮಾಡಲಾಯಿತು. ಈ ಸಂದರ್ಭದಲ್ಲಿ ಇಲ್ಲಿನ ಲಭ್ಯವಾದ ಕೃತಿಗಳಲ್ಲಿ ಮಾಹಿತಿಯನ್ನು ಹಾಗೂ ಪ್ರಕಟಿತ ಸಂಶೋಧನಾ ಪ್ರಬಂಧಗಳನ್ನು ಅನುಲಕ್ಷಿಸಲಾಗಿದೆ.

ಉತ್ತರ ಕರ್ನಾಟಕದ ಬಹುತೇಕ ಸ್ಥಳನಾಮಗಳ ಅಧ್ಯಯನ ನಡೆದಿಲ್ಲ. ಇಲ್ಲಿನ ಸ್ಥಳನಾಮಗಳು ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ ಮಹತ್ವವನ್ನು ಹೊಂದಿದ್ದು ಇವುಗಳ ಅಧ್ಯಯನದಿಂದ ಅನೇಕ ಮಹತ್ವದ ಸುಳಿವುಗಳು ಲಭ್ಯವಾಗುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಬೀಳಗಿ ತಾಲೂಕಿನ ಸ್ಥಳನಾಮಾಧ್ಯಯನ ಕೈಗೊಂಡು ಅಲ್ಲಿನ ಸ್ಥಳನಾಮಗಳ ಮಹತ್ವವನ್ನು ಬೆಳಕಿಗೆ ತರುವ ಕೆಲಸ ಮಾಡುವುದಾಗಿದೆ.

ಪ್ರಸ್ತುತ ಸ್ಥಳನಾಮಗಳ ಅಧ್ಯಯನವನ್ನು ಐದು ಅಧ್ಯಾಯಗಳಾಗಿ ವಿಭಾಗಿಸಿಕೊಂಡು ವಿವಿಧ ಅಂಶಗಳನ್ನು ಅಧ್ಯಯಿಸಲಾಗಿದೆ ಇಲ್ಲಿನ ಅಧ್ಯಯನವನ್ನು ಬೀಳಗಿ ತಾಲೂಕಿಗೆ ಮಿತಿಗೊಳಿಕೊಳ್ಳಲಾಗಿದೆ.

ಮೊದಲ ಅಧ್ಯಾಯವು ಅಧ್ಯಯನದ ಉದ್ದೇಶ ಉದ್ದೇಶಿತ ಅಧ್ಯಯನದ ವ್ಯಾಪ್ತಿ. ಅಧ್ಯಯನದಲ್ಲಿ ಅಳವಡಿಸಿಕೊಂಡಿರುವ ವಿಧಾನಗಳನ್ನು ಸೂಚಿಸುತ್ತದೆ.

ಎರಡನೆ ಅಧ್ಯಾಯವು ಈಗಾಗಲೇ ನಡೆದಿರುವ ಅಧ್ಯಯನಗಳ ಸಮೀಕ್ಷೆಯಾಗಿದೆ, ಪ್ರಕಟವಾಗಿರುವ ಕೃತಿಗಳ ವಿಶ್ಲೇಷಣೆಯ ಜೊತೆಗೆ ಕರ್ನಾಟಕದಲ್ಲಿ ಸ್ಥಳನಾಮ ಅಧ್ಯಯನದ ಆರಂಭಿಕ ಅಧ್ಯಯನಗಳನ್ನು ಗಮನಿಸುವುದಾಗಿದೆ.

ಪ್ರಕಟಿತ ಕೃತಿಗಳು ಮತ್ತು ಅಪ್ರಕಟಿತ ಎಂ.ಫಿಲ್., ಪಿಎಚ್.ಡಿ. ಪ್ರಬಂಧಗಳನ್ನು ಅಧ್ಯಯನದಲ್ಲಿ ಗಮನಿಸಲಾಗಿದೆ. ತಾಲೂಕಿನ ಪರಿಚಯದ ಕೈಪಿಡಿಯ ಜೊತೆಗೆ ತಾಲೂಕಿನ ಬಗೆಗೆ ಬಂದಿರುವ ಪ್ರಕಟಣೆ, ವಾರ್ಷಿಕ ಸಂಚಿಕೆಗಳನ್ನು ಅಧ್ಯಯನದಲ್ಲಿ ಒಳಗೊಳ್ಳುತ್ತದೆ. ಕರ್ನಾಟಕ ವಿಶ್ವವಿದ್ಯಾಲಯದ, ಕನ್ನಡ ಭಾರತ. ಬೆಂಗಳೂರು ವಿ.ವಿ. ಸಾಧನೆ, ರುಜುವಾತು, ಕನ್ನಡ ವಿಶ್ವವಿದ್ಯಾಲಯದ, ಭಾಷೆ ವಿಶ್ವಕೋಶ ನಮ್ಮ ಕನ್ನಡ, ಪುಸ್ತಕ ಹಾಗೂ ಪತ್ರಿಕೆಗಳನ್ನು ಇಲ್ಲಿ ಪರಿಶೀಲಿಸಲಾಗುತ್ತದೆ.

ಮೂರನೆಯ ಅಧ್ಯಾಯವು ಸ್ಥಳನಾಮಗಳ ಅಧ್ಯಯನದ ಸ್ಥೂಲ ವಿವರಣೆ ನೀಡುತ್ತಾ ಸ್ಥಳನಾಮಗಳ ವರ್ಗೀಕರಣ ಮಾಡವುದಾಗಿದೆ. ಹಿಂದಿನಿಂದ ಈಗಿನವರೆಗೂ ಹಲವಾರು ಭಾಷಾ ಶಾಸ್ತ್ರಜ್ಞರು ನೀಡಿರುವ ವರ್ಗೀಕರಣವನ್ನು ಗಮನಿಸಿ ಸ್ಥಳನಾಮಗಳ ವರ್ಗೀಕರಣದ

ವಿಧಾನಗಳನ್ನು ಪ್ರಸ್ತುತ ಅಧ್ಯಯನ ಹೇಗೆ ಒಳಗೊಳ್ಳುತ್ತದೆ ಎಂಬುದನ್ನು ಗಮನಿಸಲಾಗುವುದು. ಕೆಲವು ವಿದ್ವಾಂಸರ ವರ್ಗೀಕರಣ ವಿಧಾನಗಳನ್ನು ಗುರುತಿಸುವುದು.

ನಾಲ್ಕನೆಯ ಅಧ್ಯಾಯವು ಸ್ಥಳನಾಮಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಪ್ರಾಕೃತಿಕ, ಸಾಂಸ್ಕೃತಿಕ ಹಾಗೂ ಸಂಕೀರ್ಣ ಸ್ಥಳನಾಮಗಳೆಂದು ವಿಂಗಡಿಸಿ ಮಾಡಿಕೊಂಡು ಬೀಳಗಿ ತಾಲೂಕಿನ ಒಟ್ಟು ೬೪ ಸ್ಥಳನಾಮಗಳನ್ನು ವಿಶ್ಲೇಷಿಸಲಾಗುವುದು.

ಪ್ರಾಕೃತಿಕ ಲಕ್ಷಣ ಸೂಚಿಸುವ ಸ್ಥಳನಾಮಗಳನ್ನು ಶಿಲಾವಾಚಿ, ಜಲವಾಚಿ, ಸಸ್ಯವಾಚಿ, ಪ್ರಾಣಿ-ಪಕ್ಷಿವಾಚಿ ಎಂದು ಗುರುತಿಸಿ ಅವುಗಳ ಪಟ್ಟಿ ಮಾಡಿ, ಮಾದರಿಗಳನ್ನು ವಿವೇಚಿಸಿ ಕ್ಷೇತ್ರವಾಚಕಗಳನ್ನು ವಿಶ್ಲೇಷಿಸಲಾಗುವುದು.

ಸಾಂಸ್ಕೃತಿಕ ಸ್ಥಳನಾಮಗಳಲ್ಲಿ ವಿಂಗಡಿಸಿ, ದೈವವಾಚಿ ಸ್ಥಳನಾಮಗಳನ್ನು ಅಧ್ಯಯನಕ್ಕೆ ಒಳಗು ಮಾಡಲಾಗುವುದು. ಸಾಮಾಜಿಕ ಅಂಶವಾಗಿರುವ ಮಾನವನನ್ನು ಗುರುತಿಸಿಕೊಳ್ಳಲು, ವ್ಯಕ್ತಿನಾಮ ಹೊಂದಿರುವ ನಿರ್ದಿಷ್ಟ ಸ್ಥಳನಾಮಗಳನ್ನು ವಿಶ್ಲೇಷಣೆಗೆ ಒಳಗು ಮಾಡಲಾಗುವುದು. ಅಲ್ಲದೇ ಜಾತಿವಾಚಿ, ವೃತ್ತಿವಾಚಿಗಳನ್ನು ಅಧ್ಯಯನಕ್ಕೆ ಒಳಗು ಮಾಡಲಾಗುವುದು.

ಇನ್ನು ಯಾವುದೇ ವಿಭಾಗಕ್ಕೆ ಸೇರದ ಸ್ಥಳನಾಮಗಳನ್ನು ಸಂಕೀರ್ಣ ಸ್ಥಳನಾಮಗಳ ಅಡಿಯಲ್ಲಿ ಅಧ್ಯಯನವನ್ನು ಮಾಡಲಾಗುವುದು.

ಐದನೆಯ ಅಧ್ಯಾಯವು ಒಟ್ಟು ಸ್ಥಳನಾಮಗಳು ನಿರ್ದಿಷ್ಟ ಹಾಗೂ ವಾರ್ಗಿಕಗಳ ವರ್ಗೀಕರಣಗಳನ್ನು ಅಧ್ಯಯನ ಮಾಡುತ್ತಾ, ಸ್ಥಳನಾಮಗಳ ಭಾಷಿಕ ಸ್ವರೂಪ ಸ್ಥಳನಾಮ ನಿಷ್ಪತ್ತಿ, ನಿಷ್ಪತ್ತಿಗೆ ಭಾಷೆಯ ಹಿನ್ನೆಲೆ, ಇವುಗಳನ್ನು ಅಧ್ಯಯನ ಮಾಡಿ ವಿವಿಧ ಮಾದರಿಯ ಸ್ಥಳನಾಮಗಳನ್ನು ಗುರುತಿಸಲಾಗುವುದು.

ಆರನೇ ಅಧ್ಯಾಯ ಸಮಾರೋಪ ಭಾಗದಲ್ಲಿ ಶೀರ್ಷಿಕೆಯಲ್ಲಿ, ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಹಾಗೂ ಅಧ್ಯಯನಗಳ ಸಾಧ್ಯತೆಗಳನ್ನು ಸೂಚಿಸಲಾಗಿದೆ. ಹೀಗೆ ಒಟ್ಟಂದದ ರೂಪವಾಗಿ "ಬೀಳಗಿ ತಾಲೂಕಿನ ಸ್ಥಳನಾಮಾಧ್ಯಯನ" ಸಂಪ್ರಬಂಧ ಹೊಂದಿದೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಅನುಬಂಧಗಳನ್ನು ನೀಡಲಾಗಿದೆ. ಅಕಾರಾದಿಯಾಗಿ ಸ್ಥಳನಾಮಗಳು, ಕ್ಷೇತ್ರಕಾರ್ಯಕ್ಕಾಗಿ ಸಿದ್ಧಪಡಿಸಿದ ಪ್ರಶ್ನಾವಳಿ ರೂಪ, ಕ್ಷೇತ್ರ ಕಾರ್ಯದಲ್ಲಿ ಭೇಟಿ ಮಾಡಿದ ವ್ಯಕ್ತಿಗಳ ಪಟ್ಟಿ, ಅಧ್ಯಯನಕ್ಕಾಗಿ ಆಧಾರವಾದ ಗ್ರಂಥಸೂಚಿ, ನಿಯತಕಾಲಿಕೆಗಳ ಪಟ್ಟಿ, ವಿವಿಧ ನಿಘಂಟುಗಳ ಪಟ್ಟಿಯನ್ನು ಸೇರಿಸಲಾಗಿದೆ.

## ವ್ಯಾಪ್ತಿ

ಬಾಗಲಕೋಟ ಜಿಲ್ಲೆಯಲ್ಲಿ ಬೀಳಗಿಯು ಅತೀ ಭೂವಿಸ್ತಾರವನ್ನು ಒಳಗೊಂಡ ತಾಲೂಕು ಕೇಂದ್ರವಾಗಿದೆ. ಸುತ್ತ-ಮುತ್ತಲಿನ ಗ್ರಾಮಗಳು ಸಾಮಾನ್ಯ ಸೌಲಭ್ಯಗಳಿಂದ ಸುಧಾರಿಸಿವೆ. ಈ ಪ್ರದೇಶವು ಫಲವತ್ತಾದ ಭೂಮಿಯನ್ನು ಹೊಂದಿದೆ. ಉತ್ತರದಲ್ಲಿ ಕೃಷ್ಣ, ದಕ್ಷಿಣದಲ್ಲಿ ಘಟಪ್ರಭ ನದಿಗಳು ಪ್ರವಹಿಸಿರುವುದರಿಂದ ಬೀಳಗಿ ತಾಲೂಕಿನ ಗ್ರಾಮದ ಜನರು ಸುಖ-ಸಮೃದ್ಧಿಯನ್ನು

ಹೊಂದಿದ್ದಾರೆ.ಬದಲಾವಣೆ ಸೃಷ್ಟಿಯ ನಿಯಮ. ಸಮಾಜ ಬದಲಾದಂತೆ ಸಂಸ್ಕೃತಿಯೂ ಬದಲಾಗುತ್ತದೆ. ಸಂಸ್ಕೃತಿ ಬದಲಾಗಿದೆ ಎಂದರೆ ಜನರ ರೀತಿ-ನೀತಿಗಳು ಬದಲಾಗಿವೆ ಹಾಗೇ ಗ್ರಾಮಗಳೂ, ನಗರಗಳು ಬೆಳೆಯುತ್ತಾ ಹೆಸರುಗಳು ಬದಲಾಗುತ್ತವೆ. "ಬೀಳಗಿ ತಾಲೂಕಿನ ಸ್ಥಳನಾಮಾಧ್ಯಯನ" ಎಂಬ "ಸಂಪ್ರಬಂಧದಲ್ಲಿ ತಾಲೂಕಿನಲ್ಲಿ ಒಂದು ನಗರ ೬೪ ಹಳ್ಳಿಗಳಿದ್ದು ಆಡಳಿತ ಅನುಕೂಲಕ್ಕಾಗಿ ಎರಡು ಹೋಬಳಿ ಕೇಂದ್ರಗಳನ್ನಾಗಿ ಮಾಡಿದ್ದು ಬೀಳಗಿಯ ಕಂದಾಯದ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಗ್ರಾಮಗಳು ಪ್ರಸ್ತುತ ಅಧ್ಯಯನದ ವ್ಯಾಪ್ತಿ ಹೊಂದಿವೆ. ಆದರೆ ಇತ್ತೀಚಿಗೆ ಸಂಸ್ಕೃತಿಕರಣಗೊಳ್ಳುತ್ತಿರುವ ಲಂಬಾಣಿ ಜನರು ತಾಂಡಾಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡುವುದಿಲ್ಲ, ಕಾರಣ ಅವು ಸಮೀಪದ ಗ್ರಾಮವನ್ನೇ ನಾಮವನ್ನಾಗಿ ಹೊಂದಿರುವುದರಿಂದ ಅವುಗಳನ್ನು ಹೊರತುಪಡಿಸಿ ಉಳಿದ ಗ್ರಾಮಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.ಅಧ್ಯಯನದ ವ್ಯಾಪ್ತಿ ಪ್ರದೇಶದ ಭೌಗೋಳಿಕ ಪರಿಸರ, ಇತಿಹಾಸ, ಜೀವನವಿಧಾನ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಭಾಷಿಕ ಅಂಶಗಳನ್ನು ಅಳವಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ಮಿತಿಗಳು**

"ಬೀಳಗಿ ತಾಲೂಕಿನ ಸ್ಥಳನಾಮಾಧ್ಯಯನ" ಎಂಬ ಶೀರ್ಷಿಕೆಯ ಅಡಿಯಲ್ಲಿ ಅಧ್ಯಯನದ ವಿಷಯಕ್ಕೆ ಸಂಬಂಧಪಟ್ಟ ಉಪಲಬ್ಧ ಬರಹ ಹಾಗೂ ಮಾಹಿತಿಯನ್ನು ಅನುಲಕ್ಷಿಸಿ ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಸಂಪ್ರಬಂಧವು ಸುಮಾರು ೬೪ ಗ್ರಾಮನಾಮಗಳನ್ನು ಒಳಗೊಂಡಿದ್ದು ಸ್ಥಳನಾಮಗಳಲ್ಲಿ ದೊರೆಯುವ ವಿಶಿಷ್ಟ ವಾರ್ಗಿಕಗಳಿಗೆ ಸಂಬಂಧಿಸಿದಂತೆ ಕೆಲವು ಮಾದರಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

"ಸ್ಥಳನಾಮ ಅಧ್ಯಯನ ಆಯಾ ಗ್ರಾಮ ಮತ್ತು ಪ್ರದೇಶಗಳು ಭೌಗೋಳಿಕ, ಸಾಮಾಜಿಕ ಪರಿಸರದ ಮೇಲೆ ಬೆಳಕುಚೆಲ್ಲುತ್ತವೆ. ಇಲ್ಲಿ ಪಂಡಿತ-ಪಾಮರರು ಕೊಡುವ ನಿಷ್ಪತ್ತಿಗಿಂತ ನಿಜ ನಿಷ್ಪತ್ತಿಗೆ ಗಮನಕೊಟ್ಟು ಅಧ್ಯಯನ ನಡೆಸುವುದು ಇಂದಿನ ಅಗತ್ಯವಾಗಿದೆ."*

ಸ್ಥಳನಾಮಗಳ ನಿಜ ನಿಷ್ಪತ್ತಿಯ ಪ್ರಯತ್ನದಲ್ಲಿ ಅನೇಕ ತೊಡಕುಗಳನ್ನು ಎದುರಿಸಬೇಕಾಗುತ್ತದೆ. "ಸವೆದುಹೋದ ಅಥವಾ ಅರ್ಥಬದಲಾವಣೆಯಾದ ಸ್ಥಳನಾಮಗಳ ಮೂಲರೂಪಗಳನ್ನು ಕಂಡುಹಿಡಿಯಲು ಹೊರಟ ಸಂಶೋಧಕನು ಹಲವಾರು ಸಲ ಹೊಸ ಸಮಸ್ಯೆಗಳನ್ನು ಪರಿಹರಿಸಬೇಕಾಗುತ್ತದೆ. ದೊರೆಯುವ ಆಕರ ಸಾಮಗ್ರಿಗಳು ಸಾಕಾಗುವುದಿಲ್ಲ, ಜನಪದ ನಿರುಕ್ತಿಯಿಂದ ಸರಿಯಾಗಿ ನಿರ್ಣಯಕ್ಕೆ ಬರಲು ಸಾಧ್ಯವಿಲ್ಲ."*

ಪ್ರಸ್ತುತ ವಿಷಯದ ಅಧ್ಯಯನವನ್ನು ಸಮಯದ ಮಿತಿಯೊಳಗೆ ಸ್ಥಳನಾಮ ಮಾಹಿತಿ ಸಂಗ್ರಹಣೆ ಮಾಡಿದ್ದು ಲಭ್ಯವಾದ ಮಾಹಿತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಅಧ್ಯಯನ ವಿಧಾನ**

ಸ್ಥಳನಾಮಾಧ್ಯಯನ ಯಾವುದು ಹೆಚ್ಚು ಶಾಸ್ತ್ರಿಯವಾದ ಹಾಗೂ ಫಲಪ್ರದವಾಗಬಲ್ಲ ವಿಧಾನ ಎಂಬ ಪ್ರಶ್ನೆಯನ್ನು ಇಲ್ಲಿ ಚರ್ಚಿಸಬಹುದು ಅನಿಸುತ್ತದೆ. ಸ್ಥಳನಾಮಗಳು ಮೂಲತಃ

ಭಾಷಿಕ ಘಟಕಗಳಾಗಿರುವುದರಿಂದ ಭಾಷಾ ಶಾಸ್ತ್ರಿಯ ಅಧ್ಯಯನ ವಿಧಾನ ಹೆಚ್ಚು ಸೂಕ್ತವೆಂದು ಹೆಚ್ಚಿನ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಅಂತೆಯೇ ಸ್ಥಳನಾಮಗಳಲ್ಲಿ ಅಡಕವಾಗಿರುವ ಪದಗಳ ರೂಪ ಮತ್ತು ಧ್ವನಿ ಕಾಲಾನುಕ್ರಮದಲ್ಲಿ ಪರಿವರ್ತನಗೊಳ್ಳುವುದು ಸ್ವಾಭಾವಿಕ. ಆದ್ದರಿಂದ ಪರಿವರ್ತನೆಗಳು ಭಾಷಾ ಶಾಸ್ತ್ರದ ಕೆಲವು ನಿಯಮಗಳಿಂದ ನಿಯಂತ್ರಿತವಾಗಿರುವುದರಿಂದಲೂ ಅಧ್ಯಯನ ಮಾಡುವುವವನು ಮೂಲತಃ ಭಾಷಾ ವಿಜ್ಞಾನಿಯಾಗಿರಬೇಕು.

ಬೀಳಗಿ ತಾಲೂಕಿನ ಸ್ಥಳನಾಮಾಧ್ಯಯನಗಳ ಕುರಿತು ಈ ಅಧ್ಯಯನದಲ್ಲಿ . ಈ ವಿಷಯಕ್ಕೆ ಸಂಬಂಧಿಸಿದ ಲೇಖನಗಳಲ್ಲಿ ಮಾಹಿತಿಯನ್ನು ಹಾಗೂ ಲಭ್ಯವಿರುವ ಗ್ರಂಥಗಳಲ್ಲಿನ ಪೂರಕ ಮಾಹಿತಿಯನ್ನು ಅಧ್ಯಯನ ಮಾಡುವಾಗ ಅಳವಡಿಸಿಕೊಳ್ಳಲಾಗಿದೆ, ಅಲ್ಲದೇ ಸ್ಥಳನಾಮಾಧ್ಯಾಯನಕ್ಕಾಗಿ ಮಾಡಿಕೊಂಡ ಕ್ಷೇತ್ರಾಧ್ಯಯನದಲ್ಲಿ ವ್ಯಕ್ತಿಗಳಿಂದ ಮಾಹಿತಿ ಸಂಗ್ರಹಿಸಲು ಪ್ರಶ್ನಾವಳಿಯನ್ನು ತಯಾರಿಸಿ ವ್ಯಕ್ತಿಗಳ ಮೂಲಕ ಮಾಹಿತಿ ಸಂಗ್ರಹಿಸುವುದು. ಅಲ್ಲದೆ ಮೌಖಿಕ ಪ್ರಶ್ನಾವಳಿಗಳ ಮೂಲಕ ಪಡೆದ ಮಾಹಿತಿ ಸಾಮಗ್ರಿಯನ್ನು ಸಂಗ್ರಹಿಸಲಾಯಿತು, ಮತ್ತು ಮಾಹಿತಿ ಪಡೆಯುವಾಗ ಪಂಡಿತ ಮತ್ತು ಪಾಮರರು ಕೊಡುವ ಮಾಹಿತಿಯು ಸಹಾಯಕಾರಿಯಾಗಿದೆ.

ಸಂಗ್ರಹಿಸಿರುವ ಮಾಹಿತಿಯನ್ನು, ಲಭ್ಯವಾಗಿರುವ ಮಾಹಿತಿಯ ಜೊತೆಗೆ ವಿಶ್ಲೇಷಿಸಿ ಸ್ಥಳನಾಮಾಧ್ಯಯನಗಳ ಶಿಷ್ಟರೂಪಗಳು, ಜನ ಬಳಕೆಯಲ್ಲಿರುವ ಉಚ್ಚಾರಣಾ ರೂಪಗಳು, ಗ್ರಾಮ, ಹ್ರಸ್ವ ರೂಪಗಳು, ಹಳೆಯ ಹೆಸರುಗಳು, ಹಾಗೂ ಸಂಸ್ಕೃತಿಕರಣವಾಗಿರುವಿಕೆಯನ್ನು ಅಧ್ಯಯನದಲ್ಲಿ ಗಮನಿಸಲಾಗಿದೆ.

ಗ್ರಾಮದ ಅಧ್ಯಯನ ಮಾಡುವಾಗ ಭೌಗೋಳಿಕ, ಪ್ರಾಕೃತಿಕ ಪರಿಸರವನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ. ಸ್ಥಳನಾಮಕ್ಕೆ ಸಂಬಂಧಿಸಿದಂತೆ ಗ್ರಾಮದ ಆಧಿದೇವತೆ ಆ ಗ್ರಾಮಕ್ಕೆ ಸಂಬಂಧಿಸಿದ ಹಬ್ಬ ಜಾತ್ರೆಗಳು ಇತರೆ ಆಚರಣೆಗಳನ್ನು ಅಧ್ಯಯನದಲ್ಲಿ ಗಮನಿಸಲಾಗಿದೆ. ಸ್ಥಳನಾಮ ಅಧ್ಯಯನ ಪರಿಗಣಿಸುವ ಸ್ಥಳನಾಮ ನಿಷ್ಪತ್ತಿಗೆ ಸಂಬಂಧಿಸಿದಂತೆ ಚಾರಿತ್ರಿಕ, ರಾಜಕೀಯ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ವಿಶ್ಲೇಷಿಸಲಾಗಿದೆ. ಆ ಗ್ರಾಮಕ್ಕೆ ಇರುವ ಐತಿಹ್ಯಗಳು ಮತ್ತು ದಂತಕಥೆಗಳು ಜಾನಪದೀಯ ಅಂಶಗಳು ಹಾಗೂ ಮೌಖಿಕ ಪರಂಪರೆಯನ್ನು ಅಧ್ಯಯನಕ್ಕೆ ಅಳಪಡಿಸಿದೆ. ಗ್ರಾಮದ ವಿವಿಧ ಜಾತಿಯ ಹಾಗೂ ವೃತ್ತಿಗಳಿಗೆ ಸಂಬಂಧಿಸಿದಂತೆ ಭಾಷಾಬಳಕೆಯನ್ನು ಮತ್ತು ಉಚ್ಚಾರಣಾ ವ್ಯತ್ಯಾಸವನ್ನು ಗುರುತಿಸಿ ಪೂರಕ ಮಾಹಿತಿಯನ್ನು ಪಡೆಯಲಾಗಿದೆ. ಸ್ಥಳನಾಮ ಅಧ್ಯಯನದಲ್ಲಿ ವಿಶಿಷ್ಟ ಘಟಕ ಹಾಗೂ ವಾರ್ಗಿಕಘಟಕಗಳನ್ನು ಗುರುತಿಸಲಾಗಿದೆ.

ಅಧ್ಯಯಕ್ಕೆ ಮೂಲವಸ್ತುವಾಗಿ ಕರ್ನಾಟಕ ಸರಕಾರ ಪ್ರಕಟಿತ "ಕರ್ನಾಟಕ ಗ್ರಾಮ ಸೂಚಿ" ಕೃತಿಯನ್ನು ಆಧಾರವಾಗಿಟ್ಟುಕೊಂಡು ಸ್ಥಳನಾಮಾಧ್ಯಾಯನಗಳ ಪಟ್ಟಿಯನ್ನು ಅಕಾರಾದಿಯಾಗಿ ತಯಾರಿಸಲಾಯಿತು. ಮೂಲ ಪಟ್ಟಿಯಲ್ಲಿರುವ ಸ್ಥಳನಾಮಾಧ್ಯಾಯಗಳು ಕಾಲಕ್ಕೆ ತಕ್ಕಂತೆ ಬದಲಾವಣೆಯಾದರಿಂದ ಶಾಸನಗಳಲ್ಲಿ ಉಲ್ಲೇಖವಾದ ದೇವಾಲಯ, ಮಠ ಮುಂತಾದ ಧಾರ್ಮಿಕ ವಲಯಗಳಿಂದ ದೊರೆತ ಮಾಹಿತಿಯಿಂದ ಉಪಲಬ್ಧ ಮಾಹಿತಿಯೊಂದಿಗೆ

ವಿಶ್ಲೇಷಿಸುತ್ತಾ ಗ್ರಾಮನಾಮ, ನಿಜನಾಮ ಗುರುತು ಹಿಡಿಯುವುದನ್ನು ಈ ಅಧ್ಯಾಯನ ಒಳಗೊಂಡಿದೆ.

## ಕ್ಷೇತ್ರಕಾರ್ಯ ಅನುಭವ

ಸ್ಥಳನಾಮ ಶೋಧನೆಯಲ್ಲಿ ಕ್ಷೇತ್ರಕಾರ್ಯದ ಮಹತ್ವ ಅಷ್ಟಿಷ್ಟಲ್ಲ, ಸ್ಥಳ ಸಮೀಕ್ಷೆಯಿಂದ ಸಮರ್ಥ ಪಡೆಯದ ಅರ್ಥವಿವರಣೆ ಪೂರ್ಣವೆನಿಸಲಾರದು.

ಪ್ರಕೃತಿ ಮತ್ತು ಮನುಷ್ಯನ ನಡುವಣ ಈ ಸಂಬಂಧವನ್ನು ಇವತ್ತಿಗೂ ಗಟ್ಟಿಯಾಗಿ ಬೆಸೆದುಕೊಂಡು ಬಂದಿದೆ. ಇಲ್ಲಿನ ಮುಖ್ಯ ಕಸುಬಾಗಿರುವ ಬೇಸಾಯ ಎಷ್ಟೋ ಆನುಷಂಗಿಕ ಹೆಸರುಗಳಿಗೆ ಗಾತ್ರ, ಭಾಗ, ವಿಭಾಗ, ಬೆಳೆ, ಮಣ್ಣು ಮುಂತಾದವುಗಳಿಗೆ ಸಂಬಂಧಿಸಿದ ಅಧ್ಯಯನದ ಕ್ಷೇತ್ರವು ನಾಮಗಳಿಗೆ ನಿಸರ್ಗ ಬೇಸಾಯವು ಹಾಗೂ ವೃತ್ತಿಯು ತುಂಬಿದೆ.

ಗ್ರಾಮನಾಮ ಬಳಕೆಯನ್ನು ಎಲ್ಲರೂ ಬಳಸುವುದು ರೂಢಿಯಲ್ಲಿರುತ್ತದೆ. ಆದರೆ ಊರಿನ ಹೆಸರಿನ ಸೃಷ್ಟಿಯಾಗಿರುವುದರ ಹಿನ್ನೆಲೆ ಎಲ್ಲರಿಗೂ ತಿಳಿದಿರುವುದಿಲ್ಲ. ಊರಿನ ಇತಿಹಾಸವು, ಊರಿಗೆ ಹೊಂದಿಕೊಂಡಿರುವ ಪರಿಸರ ಗುರ್ತಿಸುವುವಿಕೆಯಿಂದ ಆ ಊರಿಗೆ ಹೆಸರು ಬಂದಿದೆ. ಕಾರಣ ಮುಂತಾದ ವಿಷಯ ಜ್ಞಾನ ಹೊಂದಿರುವ ಜನಗಳ ಪ್ರಮಾಣ ಕಡಿಮೆಯಾಗಿದೆ. ತಮ್ಮ ಊರಿನ ಬಗ್ಗೆ, ಊರಿನ ಅಧಿದೇವತೆಗಳ ಬಗ್ಗೆ, ದೇವಾಲಯಗಳ ಬಗ್ಗೆ ಹೆಮ್ಮೆಯ ವಿಚಾರವನ್ನು ಹೊಂದಿರುತ್ತಾರೆ ವಿನಃ ಅದರ ಹಿನ್ನೆಲೆಯನ್ನು ತಿಳಿದಿರುವುದಿಲ್ಲ, ಸಾಮಾನ್ಯವಾಗಿ ಆ ಗ್ರಾಮವು ಧಾರ್ಮಿಕ, ಐತಿಹಾಸಿಕ, ಪೌರಾಣಿಕ ಹಿನ್ನೆಲೆಯನ್ನು ಹೊಂದಿದ್ದರೆ ಮಾತ್ರ ಅದರ ಮಾಹಿತಿಯನ್ನು ತಿಳಿದಿರುತ್ತಾರೆ. ಹಾಗೂ ಗ್ರಾಮದ ಜಾತ್ರೆ, ಇತರೆ ಸಾಂಪ್ರದಾಯಿಕ ಆಚರಣೆಗಳಲ್ಲಿ ಶ್ರದ್ಧೆಯಿಂದ ಅನುಸರಿಸುತ್ತಾರೆ ಆದರೆ ಸ್ಥಳಕ್ಕೆ ನಾಮ ಹೇಗೆ ಬಂದಿತು ಎಂಬುದರ ವಿಚಾರವಾಗಿ ಐತಿಹಾಸಿಕ, ಪೌರಾಣಿಕ, ದಂತಕಥೆಗಳ ಜೊತೆಗೆ ಸೇರಿಸಿ ಹೇಳುತ್ತಾರೆ. ಈ ತರಹದ ವಿಚಾರಗಳಿಗೆ ಮುಖ್ಯ ಕಾರಣವೇನೆಂದರೆ ಸ್ಥಳನಾಮದ ನಿಜನಿಷ್ಪತ್ತಿಯ ಮಾಹಿತಿಯ ಕೊರತೆಯಿದೆ, ಶಾಸ್ತ್ರಬದ್ಧವಾದ ನಿರೂಪಣೆಗೆ ಬೇಕಾದ ಪೂರಕ ಮಾಹಿತಿ ಕೊರತೆಯಿಂದ ದಂತಕಥೆಗಳ ಸೃಷ್ಟಿಗೆ ಕಾರಣವಾಗುತ್ತಿದೆ. ಈ ವಿಷಯದಲ್ಲಿ ವಿದ್ಯಾವಂತ ಹಾಗೂ ಅವಿದ್ಯಾವಂತರ ಸ್ಥಿತಿಗಳು ಒಂದೇ ಆಗಿದ್ದು ಅವರು ಕಲ್ಪನೆಗೆ ಮೊರೆಹೋಗಿ ಐತಿಹ್ಯಗಳನ್ನು ಸೃಷ್ಟಿಸಿ ಹೇಳುವುದು ಸಹಜವಾಗಿದೆ.

ಬೀಳಗಿ ತಾಲೂಕಿನ ಎಲ್ಲಾ ಗ್ರಾಮಗಳ ಕ್ಷೇತ್ರಕಾರ್ಯ ಮಾಡುವಾಗ ಉದ್ದೇಶಿತ ಮಾಹಿತಿ ಸಂಗ್ರಹಣೆ ಸ್ಥಳಗಳಿಗೆ ತೆರಳಿದಾಗ ಬಂದ ಮಾಹಿತಿಗಳು ನೈಸರ್ಗಿಕ, ಪೌರಾಣಿಕ ಕಥೆಗಳನ್ನು ನಮ್ಮ ಮುಂದೆ ತಮ್ಮ ಮೌಖಿಕ ಅಭಿಪ್ರಾಯಗಳನ್ನು ನೀಡಿದರು, ಜೊತೆಗೆ ಉದ್ದೇಶಿತ ಕ್ಷೇತ್ರಕಾರ್ಯಕ್ಕೆ ಪ್ರಶ್ನಾವಳಿ ಪುಸ್ತಿಕೆಯನ್ನು ತಯಾರಿಸಿ ಗ್ರಾಮದ ಆಯ್ದ ವ್ಯಕ್ತಿಗಳ ಬರೆಹ ರೂಪದ ಪ್ರಶ್ನಾವಳಿ ಪುಸ್ತಿಕೆಯಲ್ಲಿ ವಿವರಣೆಯನ್ನು ಪಡೆಯಲಾಯಿತು:

***

*ಅಧ್ಯಾಯ ಎರಡು*

## ಕನ್ನಡ ಸ್ಥಳನಾಮಾಧ್ಯಯನ ಸಮೀಕ್ಷೆ

ಸ್ಥಳನಾಮ ಅಧ್ಯಯನವು ಎರಡು ಶತಮಾನಗಳಿಂದಲೂ ನಡೆಯುತ್ತಿದ್ದು, ೧೯ನೇ ಶತಮಾನದಿಂದೀಚೆಗೆ ಹೆಚ್ಚಿನ ಮಹತ್ವವನ್ನು ಪಡೆದಿದೆ. ಸಾಹಿತ್ಯ, ಕಲೆ, ಧರ್ಮ, ಸಂಸ್ಕೃತಿ ಮೊದಲಾದ ಶಾಸ್ತ್ರಗಳಂತೆ ಸ್ಥಳನಾಮವೂ ಒಂದು ವಿಜ್ಞಾನವಾಗಿ ಮನ್ನಣೆಯನ್ನು ಗಳಿಸಿದೆ.[೧]

ಸ್ಥಳನಾಮ ಅಧ್ಯಯನ ಮಾಡಲು ಪ್ರಾರಂಭಿಸಿದ ಮೊದಲ ಸಂಶೋಧಕ ಗಾಡ್‌ಫ್ರೈಡ್ ವಿಲಿಯಂ ಲಿಬ್ನಿಜ್. ೧೮೪೦ರ ನಂತರ ಫಾಯರ್ ಸೈಮನ್, ಐಸಾಕ್ ಟೇಲರ್, ಜಿ.ಜಿ. ಯಗ್ಲಿ ಮುಂತಾದ ಪಾಶ್ಚಿಮಾತ್ಯ ವಿದ್ವಾಂಸರು ಹೆಚ್ಚಿನ ಅಧ್ಯಯನಕ್ಕೆ ತಮ್ಮನ್ನು ತೊಡಗಿಸಿಕೊಂಡರು. ಭಾರತದಲ್ಲಿ ಬಿ.ಸಿ.ಲಾ ಮತ್ತು ಸಂಕಾಲಿಯಾ ಬರೆದಿರುವ ಪ್ರಬಂಧಗಳು ಸ್ಥಳನಾಮ ಇತಿಹಾಸದಲ್ಲಿ ವಿಶೇಷ ಮಹತ್ವವನ್ನು ಪಡೆದಿವೆ. ಕರ್ನಲ್ ಮೆಕೆಂಝಿ ಬರೆಸಿದ ಗ್ರಾಮ ಕೈಫಿಯತ್ತುಗಳು ಕರ್ನಾಟಕದ ಸ್ಥಳ ಪುರಾಣಗಳನ್ನೊಳಗೊಂಡಿರುವುದನ್ನು ಇಲ್ಲಿ ಉಲ್ಲೇಖಿಸಬಹುದು.[೨] ಕಿಟೆಲ್ ನಿಘಂಟು ಕೆಲವು ಊರುಗಳ ಹೆಸರುಗಳನ್ನು ಗುರುತಿಸಿದರೂ, ಅವುಗಳ ನಿಷ್ಪತ್ತಿಯ ಬಗ್ಗೆ ತಟಸ್ಥವಾಗಿದೆ. ಸಿ. ಹಯವದನ ರಾಯರು, ಮೈಸೂರು ಗೆಝೆಟಿಯರ್‌ನಲ್ಲಿನ ಕೆಲವು ನಾಮಗಳನ್ನು ಕುರಿತು ನಡೆಸಿರುವ ವಿಶ್ಲೇಷಣೆ ವಸ್ತುನಿಷ್ಠವಾಗಿಲ್ಲವಾದರೂ, ಅಧ್ಯಯನ ಮಾಡುವವರಿಗೆ ಸಹಾಯಕವಾಗಿದೆ.

ಕರ್ನಾಟಕದಲ್ಲಿ 'Place Name Society of India' ಸಂಸ್ಥೆಯು ೧೯೭೯ರಲ್ಲಿ ಪ್ರಾರಂಭವಾದ ನಂತರ, ಪ್ರತಿ ವರ್ಷವೂ ವಿಚಾರ ಸಂಕಿರಣಗಳನ್ನು ನಡೆಸುತ್ತಿದ್ದು, ಸ್ಥಳನಾಮ ಅಧ್ಯಯನವೂ ಒಂದು ವಿಶಿಷ್ಟ ಅಧ್ಯಯನ ಕ್ಷೇತ್ರವಾಗಿ ಪರಿಗಣಿಸಲ್ಪಟ್ಟಿದೆ. ಪ್ರತಿವರ್ಷವೂ ಮಂಡಿಸಲ್ಪಟ್ಟ ಸಂಶೋಧನಾ ಪ್ರಬಂಧಗಳನ್ನು ಪ್ರಕಟಿಸುತ್ತಿರುವುದು, ಹೊಸ ಅನ್ವೇಷಣೆಗಳಿಗೆ ಅವಕಾಶ ನೀಡುತ್ತಿದೆ. ಕರ್ನಾಟಕದಲ್ಲಿ ಸ್ಥಳನಾಮ ಅಧ್ಯಯನಗಳು ನಡೆದಿದ್ದು, ಈಗಾಗಲೇ ಅನೇಕ ಕೃತಿಗಳು ಪ್ರಕಟವಾಗಿವೆ. ಅನೇಕ ಸಂಶೋಧನಾ ನಿಬಂಧಗಳಿಗೆ ಎಂ.ಫಿಲ್., ಪಿಎಚ್.ಡಿ.

ಪದವಿಗಳನ್ನು ವಿಶ್ವವಿದ್ಯಾಲಯಗಳು ಪ್ರಧಾನ ಮಾಡಿವೆ. ಇದರ ಜೊತೆಗೆ ಅನೇಕ ಬಿಡಿ ಲೇಖನಗಳು ನಿಯತಕಾಲಿಕೆಗಳಲ್ಲಿ ಪ್ರಕಟವಾಗತ್ತಿವೆ.

ಸಂಶೋಧನಾ ನಿಬಂಧಗಳೆಲ್ಲವೂ ಪ್ರಕಟವಾದರೆ ಸ್ಥಳನಾಮ ಅಧ್ಯಯನಕ್ಕೆ ಇನ್ನೂ ಹೆಚ್ಚಿನ ಮಹತ್ವ ದೊರೆಯುತ್ತದೆ. ಸ್ಥಳನಾಮಕ್ಕೆ ಸಂಬಂಧಪಟ್ಟಂತೆ ನಡೆದಿರುವ ಅಧ್ಯಯನಗಳನ್ನು ಕೆಳಕಂಡ ಕೃತಿಗಳಲ್ಲಿ ಹಾಗೂ ಬರಹಗಳಲ್ಲಿ ಗುರುತಿಸಬಹುದಾಗಿದೆ.

**೧. ಎಡೆಗಳು ಹೇಳುವ ಕಂನಾಡ ಕತೆ – ಡಾ. ಶಂ.ಬಾ.ಜೋಶಿ– ೧೯೪೨**

ಕನ್ನಡ ಭಾಷೆಯಲ್ಲಿ ಸ್ಥಳನಾಮ ಅಧ್ಯಯನಕ್ಕೆ ಪ್ರಾಶಸ್ತ್ಯ ನೀಡಿದ ಮೊದಲ ಕೃತಿಯಾಗಿದೆ. ಸ್ಥಳನಾಮಗಳ ಅಧ್ಯಯನದಿಂದ ಗತಕಾಲದ ಜೀವನ ಚರಿತ್ರೆ ಸಾಂಸ್ಕೃತಿಕ ಪರಂಪರೆ ತಿಳಿಯಬಹುದು. ಊರಿನ ಹೆಸರು ಕೇಳಿಸಿಕೊಂಡ ತಕ್ಷಣ, ಆ ಊರಿಗೆ ಸಂಬಂಧಿತವಾದ ಅನೇಕ ವಿಚಾರಗಳು ಮನಸ್ಸಿನಲ್ಲಿ ಮೂಡಿಬರುತ್ತವೆ. ಎಡೆಗಳಿಗೆ ಹೆಸರು ನೀಡುವಲ್ಲಿ ಮಾನವ ಸಹಜವಾದ ಆಲೋಚನೆಗಳು ಕಂಡುಬರುತ್ತವೆ. ಹಟ್ಟಿಗಳು ಮಾನವನ ನಾಗರೀಕತೆಯ ಆರಂಭ ಕಾಲದ ವಸತಿಗಳೆಂದೂ ಊರು, ಪುರ ಮುಂತಾದವು ಅನಂತರದಲ್ಲಿ ಬಳಕೆಯಾಗಿರುವ ಸಾಮಾನ್ಯವಾರ್ಗಿಕಗಳೆಂದು ಅಭಿಪ್ರಾಯಪಟ್ಟಿದ್ದಾರೆ.

**೨. ತಮಿಳುನಾಡಿನ ಸ್ಥಳನಾಮಗಳು– ಡಾ. ಕೆಮ್ತೂರು ರಘುಪತಿ ಭಟ್ಟ, ೧೯೭೯**

ಕರ್ನಾಟಕದ ತುಳು ಭಾಷೆಯ ಪ್ರದೇಶದ ಸ್ಥಳನಾಮಗಳಿಗೆ ಸಂಬಂಧಪಟ್ಟ ಸಂಶೋಧನಾ ಕೃತಿಯಾಗಿದೆ. ಒಂದು ಊರು ಮತ್ತೊಂದು ಊರಿನಿಂದ ಪ್ರತ್ಯೇಕಗೊಳಿಸಿಕೊಳ್ಳಲು ಸ್ಥಳನಾಮಗಳು ಗುರುತುಪಟ್ಟಿಕೆಗಳಾಗಿವೆ. ಸ್ಥಳನಾಮಗಳ ಹುಟ್ಟು ರಹಸ್ಯವಾಗಿದ್ದು, ಸದಾ ಜೀವಂತವಾಗಿರುತ್ತವೆ. ತುಳುನಾಡಿನ ಸ್ಥಳನಾಮಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುವ ಜಲವಾಚಿ ಸೂಚಕಗಳಾದ ಅಲ್. ಆರ್. ಬೆಲ್ ಪದಗಳನ್ನು ನಿದರ್ಶನಗಳೊಂದಿಗೆ ಗುರುತಿಸಿದ್ದಾರೆ.

**೩. ಹೆಸರಲ್ಲೇನಿದೆ?– ಡಾ. ಆರ್ಕೆ ಮಣಿಪಾಲ– ೧೯೮೯**

ಈ ಕೃತಿಯು ಕೆಮ್ತೂರು ರಘುಪತಿ ಭಟ್ಟರ ತುಳುನಾಡಿನ ಸ್ಥಳನಾಮಗಳು ಅಧ್ಯಯನದ ಮುಂದುವರೆದ ಭಾಗವಾಗಿದೆ. ಸ್ಥಳ ನಾಮಾಧ್ಯಯನದ ಸಾಧ್ಯತೆ ಮತ್ತು ಸಾಧನೆ, ಸ್ವರೂಪ ಮತ್ತು ಸಮಸ್ಯೆ, ಸ್ಥಳನಾಮ ಮತ್ತು ವ್ಯಕ್ತಿನಾಮಗಳ ರಾಚನಿಕ ಅಧ್ಯಯನವನ್ನು ಕೃತಿಯು ಒಳಗೊಂಡಿದೆ. ಸ್ಥಳನಾಮಗಳಲ್ಲಿ ದೇಶೀಕರಣದ ಪ್ರಕ್ರಿಯೆ, ದಕ್ಷಿಣ ಭಾರತದ ಸ್ಥಳನಾಮಗಳ ಸಮೀಕ್ಷೆ ಹಾಗೂ ಸ್ಥಳ ನಾಮಾಧ್ಯಯನ ವಿಷಯಕ್ಕೆ ಪೂರಕ ಮಾಹಿತಿಗಳನ್ನು ಒದಗಿಸುತ್ತವೆ. ಉಡುಪಿ ತಾಲೂಕಿನ ಸ್ಥಳನಾಮಗಳಲ್ಲಿನ ವಿಶೇಷತೆಯನ್ನು ಲೇಖಕರು ಗುರುತಿಸಿ ಅಧ್ಯಯನ ಮಾಡಿದ್ದಾರೆ.

**೪. ಸ್ಥಳನಾಮ ವಿಜ್ಞಾನ– ಡಾ. ಎಂ.ಎಂ.ಕಲ್ಬುರ್ಗಿ– ೧೯೮೯**

ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ಹಾಗೂ ಭಾಷಿಕ ಸ್ತರಗಳಲ್ಲಿ ನಾಮ ವಿಜ್ಞಾನದ ಅಧ್ಯಯನವನ್ನು ಕೃತಿಯು ಒಳಗೊಂಡಿದೆ. ನಾಮರೂಪ ಹಾಗೂ ಅರ್ಥಕ್ಕೆ ಹೆಚ್ಚು ಮಹತ್ವ ನೀಡಿರುವ ನಾಮಾಧ್ಯಯನವು ಸಂಸ್ಕೃತಿಯ ಅಧ್ಯಯನಕ್ಕೆ ಗಮನ ನೀಡಿಲ್ಲವೆಂಬುದನ್ನು

ಲೇಖಕರು ಗುರುತಿಸಿದ್ದಾರೆ. ಅಧ್ಯಯನ ವಿಧಾನ, ಉದ್ದೇಶ, ಆಕರ ಸಾಮಗ್ರಿ, ನಾಮಕರಣ ನಡೆದು ಬಂದ ದಾರಿ, ನಾಮದ ರಾಚನಿಕ ಸ್ವರೂಪ ಹಾಗೂ ಆಧುನಿಕ ನಾಮಕರಣ ಕುರಿತ ವಿಷಯಗಳನ್ನು ಕೃತಿಯಲ್ಲಿ ವಿವರಿಸಲಾಗಿದೆ.

**೫. ವಾಗರ್ಥ– ಡಾ. ಎಂ. ಚಿದಾನಂದ ಮೂರ್ತಿ– ೧೯೮೧**

ಸ್ಥಳನಾಮ ಹಾಗೂ ವ್ಯಕ್ತಿನಾಮ ಕುರಿತ ಲೇಖನಗಳು ಈ ಕೃತಿಯಲ್ಲಿದ್ದು, ನಾಮಾಧ್ಯಯನ ಮಾಡಲು ಬೇಕಾದ ವರ್ಗೀಕರಣಗಳನ್ನು ಲೇಖನಗಳು ಒಳಗೊಂಡಿವೆ. ಕರ್ನಾಟಕ ಸ್ಥಳನಾಮಗಳು ಲೇಖನವು, ಸ್ಥಳನಾಮಗಳಲ್ಲಿ ನಿರ್ದಿಷ್ಟ ಹಾಗೂ ವಾರ್ಗಿಕಗಳ ವರ್ಗೀಕರಣ, ಭಾಷಿಕ, ಸಾಮಾಜಿಕ ದೃಷ್ಟಿಯಿಂದ ಸ್ಥಳನಾಮಾಧ್ಯಯನ ಹಾಗೂ ಸ್ಥಳನಾಮಗಳ ಇತಿಹಾಸವನ್ನು ವಿಶ್ಲೇಷಿಸಿದೆ. ವರ, ವಾರ ವಾರ್ಗಿಕಗಳಿಂದ ಕೊನೆಯಾಗುವ ವಾರ್ಗಿಕಗಳ ವಿವರವನ್ನು ಕೃತಿಯು ಒಳಗೊಂಡಿದೆ. ಬ್ರಾಹ್ಮಣ ಅಗ್ರಹಾರ, ಮಂಗಲ, ಆಲ, ಬೊಮ್ಮ, ಶ್ರೋತ್ರೀಯ, ಮಹಾಜನ, ಹಾರೊ (ಹಾರುವ) ಮುಂತಾದ ಪದಗಳು ಊರಿನ ಹೆಸರಿನಲ್ಲಿದ್ದರೆ, ಅವು ಬ್ರಾಹ್ಮಣರ ದಾನದ ಊರುಗಳೆಂದು ಲೇಖಕರು ವಿವರಿಸಿದ್ದಾರೆ. ದೇಕಟ್ಟೆ ಶಾಸನಗಳ ಊರುಗಳು– ಲೇಖನದಲ್ಲಿ ಇತಿಹಾಸಕ್ಕೆ ಸಂಬಂಧಪಟ್ಟಂತೆ ಉಲ್ಲೇಖಿತವಾಗಿರುವ ಊರುಗಳನ್ನು ಗುರುತಿಸಲಾಗಿದೆ.

**೬. ಚನ್ನಪಟ್ಟಣ ತಾಲೂಕಿನ ಸ್ಥಳನಾಮಗಳು– ಬೊಮ್ಮೇಗೌಡ–೧೯೯೫**

ಇದು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಶ್ರೀ ಬೊಮ್ಮೇಗೌಡರು ಸಲ್ಲಿಸಿರುವ ಅಪ್ರಕಟಿತ ಎಂ.ಫಿಲ್. ನಿಬಂಧವಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣ ತಾಲೂಕಿನ ಸ್ಥಳನಾಮಗಳ ಭೌಗೋಳಿಕ, ಸಾಮಾಜಿಕ, ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಧ್ಯಯನವನ್ನು ಈ ನಿಬಂಧವು ಒಳಗೊಂಡಿದೆ.

**೭. ದಕ್ಷಿಣ ಕನ್ನಡ ಜಿಲ್ಲೆಯ ಐತಿಹ್ಯಗಳು– ಡಾ. ಎ. ಸುಬ್ಬಣ್ಣ ರೈ– ೧೯೯೬**

ಇದು ಮುಂಬೈ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಪಿಎಚ್.ಡಿ. ನಿಬಂಧವಾಗಿದೆ. ಐತಿಹ್ಯ ಪದದ ನಿಷ್ಪನ್ನ, ಐತಿಹ್ಯ– ದಂತಕತೆ – ಸ್ಥಳಪುರಾಣದ ನಡುವಿನ ವ್ಯತ್ಯಾಸವನ್ನು ಲೇಖಕರು ಗುರುತಿಸಿದ್ದಾರೆ. ಐತಿಹಾಸಿಕ ಕುರುಹು, ಅವಶೇಷಗಳು, ಐತಿಹ್ಯಗಳಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತಿದ್ದು, ನೈಜ ಘಟನೆಗಳನ್ನು ಗುರುತಿಸಲು ಸಹಾಯಕವೆಂದು ಲೇಖಕರು ವಿವರಿಸಿದ್ದಾರೆ.

**೮. ಆಂಧ್ರ–ಕರ್ನಾಟಕ ಗಡಿ ಪ್ರದೇಶದ ಸ್ಥಳನಾಮಗಳು – ಡಾ. ಜಾಜಿ ದೇವೇಂದ್ರಪ್ಪ– ೨೦೦೨**

ಈ ಕೃತಿಯು ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ. ಜಾಜಿ ದೇವೇಂದ್ರಪ್ಪನವರು ಸಲ್ಲಿಸಿರುವ ಪಿಎಚ್.ಡಿ. ನಿಬಂಧವಾಗಿದೆ. ಕರ್ನಾಟಕ–ಆಂಧ್ರ ಗಡಿನಾಡಿನ ಸ್ಥಳನಾಮಗಳ ತೌಲನಿಕ ಅಧ್ಯಯನವಾಗಿದೆ. ಗಡಿನಾಡ ಭಾಗಗಳಲ್ಲಿ ಕ್ಷೇತ್ರಕಾರ್ಯ ಮಾಡುವ ವಿಧಾನ ಹಾಗೂ ಪೂರಕ ಸಿದ್ಧತೆಗಳ ವಿವರಗಳನ್ನು ಲೇಖಕರು ನೀಡಿದ್ದಾರೆ.

೯. ಕರ್ನಾಟಕ ಗೆಝೆಟಿಯರ್-೩ – ಕರ್ನಾಟಕ ಸರ್ಕಾರದ ಪ್ರಕಟಣೆ– ೧೯೮೬

ಕರ್ನಾಟಕದ ವಿವರಗಳನ್ನೊಳಗೊಂಡಿರುವ ಮೂರನೇ ಭಾಗದಲ್ಲಿ, ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳ ವಿವರಣೆಯನ್ನು ನೀಡಲಾಗಿದೆ. ಇದು ಕೆಲವು ಸ್ಥಳನಾಮಗಳ ನಿಷ್ಪತ್ತಿಯನ್ನೂ, ವಿವರಗಳನ್ನೂ ಒಳಗೊಂಡಿದೆ. ರಾಜಕೀಯ, ಭೌಗೋಳಿಕ ಪರಿಸರ, ಪ್ರಕೃತಿ ಸೌಂದರ್ಯ, ಉದ್ದಿಮೆಗಳಿಂದ, ನೀರಾವರಿ ಯೋಜನೆಗಳಿಂದ ಖ್ಯಾತಿಯನ್ನು ಪಡೆದಿರುವ ಪ್ರಾಚೀನ ಸ್ಥಳನಾಮಗಳ ಪರಿಚಯವನ್ನು ಕೃತಿಯಲ್ಲಿ ಗಮನಿಸಬಹುದು. ಐತಿಹಾಸಿಕವಾಗಿ ಮಹತ್ವ ಪಡೆದ ಊರುಗಳ ಬಗ್ಗೆ ಮಾಹಿತಿಯನ್ನು ಒಳಗೊಂಡಿದೆ.

೧೦. ಭಾಷೆ– ವಿಶ್ವಕೋಶ, ಕನ್ನಡ ವಿಶ್ವವಿದ್ಯಾಲಯ, ಸಂ. ಕೆ.ವಿ.ನಾರಾಯಣ

ಹೆಸರುಗಳು ಎಂಬ ಲೇಖನದಲ್ಲಿ ಡಾ. ಕೆ.ಎಂ.ವೀರಭದ್ರ ಶರ್ಮರವರು ಸ್ಥಳನಾಮ ಹಾಗೂ ವ್ಯಕ್ತಿನಾಮ ಕುರಿತು ವಿವರಸಿದ್ದಾರೆ. ಸ್ಥಳನಾಮಗಳ ಪ್ರಾಥಮಿಕ ವಿವರಗಳಿಗೆ ಸಬಂಧಪಟ್ಟಂತೆ ಸ್ಥೂಲವಾದ ಪರಿಚಯಾತ್ಮಕ ಲೇಖನವಾಗಿದ್ದು, ವಿಶಿಷ್ಟ ಘಟಕಗಳ ವರ್ಗೀಕರಣವನ್ನು ಗುರುತಿಸಲಾಗಿದೆ.

ಭೌಗೋಳಿಕ ಸ್ಥಿತಿ, ಶಿಲಾವಾಚಿ, ಜಲವಾಚಿ, ಪ್ರಾಣಿವಾಚಿ, ಸಸ್ಯವಾಚಿ, ಸಾಮಾಜಿಕ, ಪೌರಾಣಿಕ, ಐತಿಹಾಸಿಕ ಹಾಗೂ ಧಾರ್ಮಿಕ ವಿವರಗಳನ್ನೊಳಗೊಂಡಂತೆ ಸ್ಥಳನಾಮ ನಿಷ್ಪತ್ತಿಗೆ ಕಾರಣವಾಗುವ ಅಂಶಗಳ ವಿವರಣೆಗಳನ್ನು ನೀಡಲಾಗಿದೆ. ಹೆಸರುಗಳ ಅಧ್ಯಯನಕ್ಕೆ ಮಹತ್ವ ದೊರೆಯಬೇಕೆಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ.

೧೧. ಸ್ಥಳನಾಮಗಳು: ಪರಿವರ್ತನೆ ಮತ್ತು ಪ್ರಭಾವ, ಕನ್ನಡ ವಿಶ್ವವಿದ್ಯಾಲಯ, ಸಂ. ಕೆ.ವಿ.ನಾರಾಯಣ

ಸ್ಥಳನಾಮಗಳ ಮೇಲೆ ಆಗಿರುವ ಪ್ರಭಾವಗಳು ಹಾಗೂ ಪರಿವರ್ತನೆಗಳನ್ನು ಕುರಿತ ಐದು ಲೇಖನಗಳು ಹಾಗೂ ಕರ್ನಾಟಕದಲ್ಲಿ ನಡೆದಿರುವ ಸ್ಥಳನಾಮಾಧ್ಯಯನ ಇತಿಹಾಸವನ್ನು ಕುರಿತು ಬರೆದ ಲೇಖನವನ್ನು ಒಳಗೊಂಡಿದೆ.

ಡಾ. ವಿ.ಗೋಪಾಲಕೃಷ್ಣರವರು, ಕರ್ನಾಟಕದ ಸ್ಥಳನಾಮಗಳ ಮೇಲೆ ಸಂಸ್ಕೃತ ಭಾಷೆಯ ಪ್ರಭಾವದಿಂದ ಸ್ಥಳನಾಮ ರಚನೆಯಲ್ಲಿನ ಪರಿವರ್ತನೆಗಳನ್ನು ಗುರುತಿಸಿದ್ದಾರೆ. ಆಂಗ್ಲರ ಆಡಳಿತದ ಸಂದರ್ಭದಲ್ಲಿ, ಇಂಗ್ಲಿಶ್ ಭಾಷೆಯ ಹಾಗೂ ಸಂಸ್ಕೃತಿಯ ಪ್ರಭಾವದಿಂದ ಸೃಷ್ಟಿಯಾದ ಸ್ಥಳನಾಮಗಳನ್ನು ಡಾ. ಪಾಂಡುರಂಗ ಬಾಬುರವರು ವಿವರಿಸಿದ್ದಾರೆ. ಕರ್ನಾಟಕದ ಸ್ಥಳನಾಮಗಳ ಮೇಲೆ ದ್ರಾವಿಡ ಭಾಷಾ ಪ್ರಭಾವಗಳನ್ನು ಡಾ. ಎಸ್.ಎಸ್.ಅಂಗಡಿಯವರು ವಿವರಿಸಿದ್ದಾರೆ. ಮರಾಠಿ ಭಾಷೆಯ ಪ್ರಭಾವದಿಂದ ಸೃಷ್ಟಿಯಾಗಿರುವ ಸ್ಥಳನಾಮಗಳು, ಪ್ರಾಕೃತ ಶಾಸನಗಳಲ್ಲಿ ಕಂಡುಬಂದಿರುವ ಸ್ಥಳನಾಮಗಳ ವಿವರಗಳನ್ನು ಎಂ.ಬಿ.ನೇಗಿನಹಾಳ್‌ರವರು, ಇಸ್ಲಾಂ– ಉರ್ದು ಪ್ರಭಾವದಿಂದ ಸ್ಥಳನಾಮಗಳ ಬಗ್ಗೆ ಡಾ. ಕೆ.ಎಂ.ವೀರಭದ್ರ ಶರ್ಮರವರು ವಿವರಿಸಿದ್ದಾರೆ.

## ೧೨. ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ- ಡಾ. ವಿಶ್ವನಾಥ- ೨೦೦೦

ಡಾ. ಕೆ.ವಿಶ್ವನಾಥರ ಗ್ರಾಮನಾಮಗಳ ಸಾಂಸ್ಕೃತಿಕ ಪರಿವೇಷ ಕೃತಿಯು ಸ್ಥಳನಾಮ ಅಧ್ಯಯನ ಹಿನ್ನಲೆಯಲ್ಲಿರುವ ಮೂಲಭೂತ ಅಂಶಗಳನ್ನು ಹಾಗೂ ಸ್ಥಳನಾಮ ಅಧ್ಯಯನ ಹಿನ್ನಲೆಯಲ್ಲಿರುವ ಮೂಲಭೂತ ಅಂಶಗಳನ್ನು ಒಳಗೊಂಡಿದೆ.

## ೧೩. ಜನಪ್ರಿಯ ೩೦೦ ಸ್ಥಳನಾಮಗಳು- ಬೆ.ಗೋ. ರಮೇಶ್- ೧೯೯೪

ಕರ್ನಾಟಕ ರಾಜ್ಯದ ಜಿಲ್ಲಾ ಕೇಂದ್ರದ ಹೆಸರಿನ ನಿಷ್ಪನ್ನ, ಜಿಲ್ಲೆಯಲ್ಲಿರುವ ಹಲವು ಸ್ಥಳನಾಮಗಳ ನಿಷ್ಪನ್ನ, ಸ್ಥಳನಾಮಗಳಿಗೆ ಸಂಬಂಧಪಟ್ಟಂತೆ ಐತಿಹ್ಯ, ಇತಿಹಾಸ, ಪುರಾಣ ಹಾಗೂ ಮೌಖಿಕ ಪರಂಪರೆಗಳ ಹಿನ್ನಲೆಯಲ್ಲಿ ವಿವರಣೆ ನೀಡಲಾಗಿದೆ. ಇದು ಸಂಶೋಧನಾತ್ಮಕ ಕೃತಿಯಲ್ಲದಿದ್ದರೂ, ಸ್ಥಳಗಳ ಹಿನ್ನೆಲೆ ತಿಳಿಯಲು ಪೂರಕ ಮಾಹಿತಿಗಳು ದೊರೆಯುತ್ತವೆ. ಸ್ಥಳನಾಮ ನಿಷ್ಪತ್ತಿಯ ಬಗ್ಗೆ ಆಸಕ್ತಿ ಹೊಂದಿದವರಿಗೆ ಸ್ಥೂಲ ವಿವರಣೆಯನ್ನು ಕೃತಿಯು ನೀಡುತ್ತದೆ.

## ೧೪. ದೇವನಹಳ್ಳಿ ತಾಲೂಕು ದರ್ಶನ- ಬೆ.ಕಾ. ಮೂರ್ತಿಶ್ವರಯ್ಯ- ೧೯೮೬

ಐಬಿಎಚ್ ಪ್ರಕಾಶನದ ಈ ಕೃತಿಯು ದೇವನಹಳ್ಳಿ ತಾಲೂಕಿನ ಇತಿಹಾಸ, ಐತಿಹ್ಯ, ಸಾಮಾಜಿಕ, ಸಾಂಸ್ಕೃತಿಕ, ವ್ಯವಾಹರಿಕ ಭೂಲಕ್ಷಣಗಳ ವಿವರಗಳನ್ನು ಒಳಗೊಂಡಿದೆ. ಇತಿಹಾಸ ಹೊರತುಪಡಿಸಿ ಉಳಿದ ಎಲ್ಲಾ ವಿವರಗಳು ಆಧುನಿಕ ವ್ಯವಸ್ಥೆಗಳಿಗೆ ಸಂಬಂಧಿಸಿವೆ.

## ೧೫. ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು ಸಂ. ಲಕ್ಷ್ಣ ತೆಲಗಾವಿ, ಎಂ.ವಿ.ಶ್ರೀನಿವಾಸ- ೧೯೭೬

ಈ ಕೃತಿಯು ಐತಿಹಾಸಿಕ ಮಹತ್ವ ಪಡೆದ ಸ್ಥಳನಾಮಗಳ ವಿವರಗಳನ್ನು ಒಳಗೊಂಡಿದೆ. ಆದವಾನಿ, ಆಲೂರು, ಉಜ್ಜಯನಿ, ಉಚ್ಚಂಗಿ, ಮಧುರಾಪುರಿ, ಬಳ್ಳಾರಿ, ಮಂತ್ರಾಲಯ, ರಾಮಗಿರಿ, ಇಂಗಳದಾಳು ಮೊದಲಾದ ಊರುಗಳ ಸ್ಥಳೈತಿಹ್ಯ, ಭೌಗೋಳಿಕ ವಿವರ ಹಾಗೂ ಚಾರಿತ್ರಿಕ ಅಂಶಗಳನ್ನೂ ವಿವರಿಸಿದ್ದಾರೆ. ಕನ್ನಡ ನಾಡಿನ ಊರುಗಳು ಲೇಖನವು ಕುಂತಲ ನಾಡಿನ ವಿಸ್ತಾರವನ್ನು ಹೇಳುವುದರ ಜೊತೆಯಲ್ಲಿ ಅನಂತಪುರ, ಬೆಲಗೂರು, ಶೆಟ್ಟಿಯಕೆರೆ, ಹುಳಿಯೂರು, ಹಂಪೆ, ಸಂತೆಬೆನ್ನೂರು- ಮೊದಲಾದ ಸ್ಥಳಗಳ ಶಾಸನೋಕ್ತ ನಿರುಕ್ತಿ, ಐತಿಹಾಸಿಕ ಅಂಶಗಳನ್ನು ದಾಖಲಿಸಿದ್ದಾರೆ. ಆಂಧ್ರಪ್ರದೇಶಕ್ಕೆ ಸೇರಿಕೊಂಡಿರುವ ಅನೇಕ ಊರುಗಳು ಕನ್ನಡ ನಾಡಿನ ಭೌಗೋಳಿಕ ವ್ಯಾಪ್ತಿಯಲ್ಲಿ ಇದ್ದಿತೆಂಬುದು ತಿಳಿದುಬರುತ್ತದೆ.

## ೧೬. ಬಸವಣ್ಣನವರ ಹೆಸರಿರುವ ಊರುಗಳು- ಹೀ.ಚಿ.ಶಾಂತವೀರಯ್ಯ

ಕರ್ನಾಟಕದಲ್ಲಿ ನಡೆದ ವಚನ ಚಳುವಳಿಯಲ್ಲಿ ಬಸವಣ್ಣನವರು ಅತ್ಯಂತ ಪ್ರಮುಖರಾಗಿದ್ದು, ಇವರ ಹೆಸರಿನಲ್ಲಿ ಅನೇಕ ಊರುಗಳು ಸೃಷ್ಟಿಯಾಗಿವೆ. ಬಸವ ಎಂಬ ನಿರ್ದಿಷ್ಟವಿರುವ ಊರುಗಳಲ್ಲಿ ಅನೇಕ ಊರುಗಳು ಬಸವಣ್ಣನವರಿಂದಲೇ ಸೃಷ್ಟಿಯಾದುದೆಂದು ಲೇಖಕರ ಅಭಿಪ್ರಾಯವಾಗಿದೆ. ಬಸವಪುರ, ಬಸವನಹಳ್ಳಿ, ಬಸವಾಪಟ್ಟಣ ಎಂಬ ಊರುಗಳನ್ನು

ಉದಾಹರಣೆಯಾಗಿ ನೀಡಿ ಸುಮಾರು ೧೩೬ ಊರುಗಳನ್ನು ತಮ್ಮ ಲೇಖನದಲ್ಲಿ ಸೂಚಿಸಿದ್ದಾರೆ. ಬಸವ ಎಂಬುದು ಬಸವಣ್ಣನವರ ಹೆಸರನ್ನು ಸೂಚಿಸುವುದಾದರೂ, ಎಲ್ಲಾ ಸಂದರ್ಭಗಳಲ್ಲಿಯೂ ಇದೇ ಕಾರಣವೆಂದು ಹೇಳಲಾಗದು. ಆದುದರಿಂದ ಈ ರೀತಿಯ ಸಾಮಾನ್ಯೀಕರಣಗೊಳಿಸುವಿಕೆ ಅಸಾಧುವಾಗಿದೆ ಎನ್ನಬಹುದು.

**೧೭. ಜಾನಪದ ಸಿರಿ– ಡಾ. ಬಸವರಾಜ ಪೊಲೀಸ್ ಪಾಟೀಲ್– ೧೯೯೦**

ಐತಿಹ್ಯಗಳು ಸೃಷ್ಟಿಯಾದ ಹಿನ್ನಲೆಯ ವಿವಗಳನ್ನೂ, ಅವುಗಳಲ್ಲಿ ಮುಖ್ಯವಾಗಿ ಬರುವ ದೈವ, ಪುರಾಣ, ಅತಿಮಾನವ ಶಕ್ತಿ ಮುಂತಾದ ಅಂಶಗಳನ್ನೂ ಸ್ಥಳೀಯ ಐತಿಹ್ಯಗಳು ಎಂಬ ಸಂಪ್ರಬಂಧವು ಒಳಗೊಂಡಿದೆ. ಈ ಐತಿಹ್ಯಗಳು ಸ್ಥಳನಾಮ ನಿಷ್ಪನ್ನಗಳಿಗೆ ಹೇಗೆ ಸಬಂಧಿಸಿವೆ ಎಂಬುದನ್ನು ಈ ಬರಹದಲ್ಲಿ ವಿವರಿಸಲಾಗಿದೆ.

**೧೮. ಹರತಿಸಿರಿ– ಸಂ. ಲಕ್ಷ್ಮಣ ತೆಲಗಾವಿ– ೧೯೮೭**

ಈ ಕೃತಿಯಲ್ಲಿ ಸ್ಥಳನಾಮಗಳಿಗೆ ಸಂಬಂಧಿಸಿದಂತೆ ಕೆಮ್ತೂರು ರಘುಪತಿ ಭಟ್ಟರ ಸ್ಥಳನಾಮಾಧ್ಯಯನದ ಇತ್ತೀಚಿನ ಒಲವುಗಳು– ಒಂದು ಸ್ಥೂಲ ಚಿತ್ರ ಎನ್ನುವ ಲೇಖನವಿದೆ. ಸ್ಥಳನಾಮಗಳ ಅಧ್ಯಯನ ಕ್ಷೇತ್ರದಲ್ಲಿನ ಬೆಳವಣಿಗೆ, ಅವುಗಳ ಮಹತ್ವ ಮುಂದಿನ ದಿನಗಳಲ್ಲಿ ಅವುಗಳ ಗುರಿಯನ್ನು ವಿವರಿಸಿದ್ದಾರೆ.

**೧೯. ಕೋಲಾರ ಜಿಲ್ಲೆಯ ಸ್ಥಳನಾಮಗಳು– ಸಾಮಾಜಿಕ ಭಾಷಾಶಾಸ್ತ್ರ ಅಧ್ಯಯನ– ವಿ. ಗೋಪಾಲ ಕೃಷ್ಣ (ಅಪ್ರಕಟಿತ ಪಿಎಚ್.ಡಿ. ಪ್ರಬಂಧ– ೧೯೮೮)**

ಕೋಲಾರ ಜಿಲ್ಲೆಯ ಸ್ಥಳನಾಮ ನಿಷ್ಪನ್ನ ಕುರಿತ ಅಧ್ಯಯನವನ್ನು ಒಳಗೊಂಡ ಈ ಪ್ರಬಂಧದಲ್ಲಿ, ಸಾಮಾಜಿಕ ಹಾಗೂ ವರ್ಣನಾತ್ಮಕ ವಿಶ್ಲೇಷಣೆಯನ್ನು ಸಂಶೋಧಕರು ಮಾಡಿದ್ದಾರೆ. ಕೋಲಾರ ಜಿಲ್ಲೆಯ ಎಲ್ಲಾ ಸ್ಥಳನಾಮಗಳನ್ನು ವರ್ಣನಾತ್ಮಕ ವಿಶ್ಲೇಷಣೆ ಮಾಡಿರುವುದು ಈ ಕೃತಿಯ ವಿಶೇಷವಾಗಿದೆ. ಸ್ಥಳನಾಮಗಳ ಅಧ್ಯಯನ ವಿಧನ, ಅಕೃತಿಮಾ ವಿಶ್ಲೇಷಣೆ, ಸಂಧಿಕಾರ್ಯ ನಡೆದಿರುವಿಕೆ, ನಿರ್ದಿಷ್ಟಗಳ ಅರ್ಥ ವಿವರಣೆ, ವಾರ್ಗಿಕಗಳ ವಿಂಗಡಣೆ ಮುಂತಾದ ವಿವರಗಳನ್ನೂ ಈ ಅಧ್ಯಯನವು ಒಳಗೊಂಡಿದೆ. ಸಂಶೋಧಕರಿಗೆ ಅವಶ್ಯಕವಾದ ಹೆಚ್ಚಿನ ಮಾಹಿತಿಗಳು ಈ ಪ್ರಬಂಧದಲ್ಲಿ ದೊರೆಯುತ್ತದೆ.

**೨೦. ಬೀದರ ಜಿಲ್ಲೆಯ ಸ್ಥಳನಾಮಗಳು– ಭಂಡೆ ವೈಜನಾಥ (ಅಪ್ರಕಟಿತ ಪಿಎಚ್.ಡಿ. ಪ್ರಬಂಧ ೧೯೯೦)**

ಬೀದರ ಜಿಲ್ಲೆಯ ಸ್ಥಳನಾಮಾಧ್ಯಯನ ಮಾಡಿರುವ ಈ ಸಂಶೋಧನೆಯಲ್ಲಿ, ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಕೇಂದ್ರೀಕರಿಸಿಕೊಂಡಿದೆ. ಸ್ಥಳನಾಮ ಅಧ್ಯಯನದಲ್ಲಿ ನಿಷ್ಪನ್ನಕ್ಕೆ ಹೆಚ್ಚು ಮಹತ್ವ ನೀಡದೆ, ಅದಕ್ಕೆ ಸಂಬಂಧಿಸಿದ ಇತಿಹಾಸ, ಭೌಗೋಳಿಕ ಪರಿಸರ ಹಾಗೂ ಬೀದರ್ ಕನ್ನಡ ಉಪಭಾಷೆಯ ವಿವರವನ್ನು ನಿಬಂಧವು ಒಳಗೊಂಡಿದೆ. ಸ್ಥಳನಾಮ ವಿಜ್ಞಾನದ ಇತಿಹಾಸ, ಸ್ವರೂಪ, ಬೀದರ್ ಪ್ರದೇಶದ ಪರಿಚಯ, ಸ್ಥಳನಾಮಗಳ ಭಾಷಿಕ ವಿವಗಳನ್ನು

ಅಧ್ಯಯನದಲ್ಲಿ ಗುರುತಿಸಬಹುದು. ಸ್ಥಳನಾಮಗಳ ಸಾಂಸ್ಕೃತಿಕ ಹಿನ್ನಲೆ ವರ್ಗೀಕರಣದ ವಿಧಗಳು, ಸ್ಥಳನಾಮಗಳಲ್ಲಿನ ಜಾನಪದ ಹಿನ್ನಲೆಯನ್ನು ಪ್ರಸ್ತುತ ಅಧ್ಯಯನವು ಒಳಗೊಂಡಿದೆ.

**೨೧. ಚಾಮರಾಜನಗರ ತಾಲೂಕಿನ ಸ್ಥಳನಾಮಗಳ ಅಧ್ಯಯನ, ನಂಜಯ್ಯ (ಅಪ್ರಕಟಿತ ಪಿಎಚ್.ಡಿ. ಪ್ರಬಂಧ) - ೨೦೦೦**

ಮೈಸೂರು ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿರುವ ಈ ಮಹಾಪ್ರಬಂಧವು ಚಾಮರಾಜನಗರ ತಾಲೂಕಿನ ಸ್ಥಳನಾಮಗಳನ್ನು ಕುರಿತ ಸಂಶೋಧನಾತ್ಮಕ ಅಧ್ಯಯನವಾಗಿದೆ. ಈ ಮಹಾಪ್ರಬಂಧವು ಐದು ಅಧ್ಯಾಯಗಳನ್ನೊಳಗೊಂಡಿದ್ದು, ವರ್ಣನಾತ್ಮಕ ಅಧ್ಯಯನ ಮಾದರಿಯಾಗಿದೆ. ಸ್ಥಳನಾಮಗಳ ಉಗಮ-ಪ್ರಾಯೋಜನಗಳನ್ನು ವಿವರಿಸಿರುವ ಸಂಶೋಧಕರು, ತಾಲೂಕಿನ ಸ್ಥಳನಾಮಗಳನ್ನು ವಿಶಿಷ್ಟಗಳಿಗೆ ಅನುಗುಣವಾಗಿ ವಿಂಗಡಿಸಿ ಮಾದರಿಗಳನ್ನು ಗುರುತಿಸಿದ್ದಾರೆ. ಸ್ಥಳನಾಮಗಳ ಭಾಷಿಕ ವಿಶ್ಲೇಷಣೆಯಲ್ಲಿ ಸಂಧಿ, ಸಮಾಸ, ತದ್ಭವ, ಸಮಸಂಸ್ಕೃತ, ಸಜಾತೀಯ-ವಿಜಾತೀಯ ಒತ್ತಕ್ಷರಗಳ ಸ್ಥಳನಾಮಗಳನ್ನು ಗುರುತಿಸಲಾಗಿದೆ.

ಸಾಹಿತ್ಯ ಕೃತಿಗಳಲ್ಲಿ, ಶಾಸನಗಳಲ್ಲಿ ದಾಖಲಾಗಿರುವ ಸ್ಥಳನಾಮಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ. ಮಹಾಪ್ರಬಂಧದ ಕೊನೆಯ ಭಾಗದಲ್ಲಿ ಚಾಮರಾಜನಗರ ತಾಲೂಕಿನ ಸ್ಥಳನಾಮಗಳ ನಿಷ್ಪನ್ನವನ್ನು ಒಳಗೊಂಡಿದ್ದು, ಶ್ಲಾಘನೀಯವಾದ ಕಾರ್ಯ ಮಾಡಲಾಗಿದೆ.

ಇತ್ತೀಚಿಗೆ ಪ್ರಕಟವಾದ ಡಾ. ಎಂ.ಎಂ.ಕಲ್ಬುರ್ಗಿಯವರ ಮಹಾರಾಷ್ಟ್ರದ ಕನ್ನಡ ಶಾಸನಗಳು" ಎಂಬ ಗ್ರಂಥದಲ್ಲಿ ಪ್ರಾಚೀನ ಸ್ಥಳನಾಮಗಳು ಮತ್ತು ವ್ಯಕ್ತಿನಾಮಗಳ ಬಗ್ಗೆ ಮಹತ್ವ ಪೂರ್ಣ ವಿವೇಚನೆಯಿದೆ. ಕೆ ಗೋಪಾಲಕೃಷ್ಣರವರ (೧೯೪೮) ಕೋಲಾರ ಜಿಲ್ಲೆಯ ಸ್ಥಳನಾಮಗಳು ಎಂಬ ಇದೇ ಲೇಖಕರು "ಸ್ಥಳನಾಮ ಅಧ್ಯಯನಗಳು" (೧೯೮೭) ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ.

ರಾಧಾಪಟೇಲರ ಹಾಸನ ಜಿಲ್ಲೆಯ ಸ್ಥಳನಾಮಗಳ ಕುರಿತು ಲೇಖನವು "Studies in Indian Place Names (STDN) Vol-5 ದಲ್ಲಿ ಪ್ರಕಟವಾಗಿದೆ. ಕರ್ನಾಟಕದ ಸ್ಥಳನಾಮಗಳ ಕುರಿತು ಈ ಪತ್ರಿಕೆಯು ಇದುವರೆಗಿನ ಸಂಪುಟಗಳಲ್ಲಿ ಬಿ.ಬಿ.ರಾಜಪುರೋಹಿತ ಕೆ.ಎಂ.ಭದ್ರಿ , ಎಸ್.ಕೆ ಹಾವನೂರ, ಮಾಧವ ನಾ. ಕಟ್ಟಿ, ವೆಂಕಟೇಶ ಮುಂತಾದವರ ಲೇಖನಗಳು ಪ್ರಕಟವಾಗಿವೆ. ಈಗ ಕರ್ನಾಟಕದ ಸ್ಥಳನಾಮಗಳ ಜಿಲ್ಲಾವಾರು ಅಧ್ಯಯನ ತೀವ್ರವಾಗಿ ಆಗಬೇಕಾಗಿದೆ.

**ಲೇಖನಗಳು**

೧. ವರ, - ವಾರ ಎಂದು ಕೊನೆಯಾಗುವ ಊರ ಹೆಸರುಗಳು- ಎಂ. ಚಿದಾನಂದಮೂರ್ತಿ, ಸಂಪುಟ-೩, ಸಂಚಿಕೆ-೧, ಜನವರಿ-ಮಾರ್ಚ್, ೧೯೩೮

೨. ಸ್ಥಳನಾಮ ರೂಪುರೇಷೆ- ಕೆಮ್ತೂರು ರಘುಪತಿಭಟ್ಟ, ಸಂಪುಟ-೮, ಸಂಚಿಕೆ-೨, ಏಪ್ರಿಲ್-ಜೂನ್, ೧೯೭೯

೩. -ಪುರ -ವರ -ವಾರ ಎಂಬುದೇ ಸರಿ- ಎಂ. ಚಿದಾನಂದಮೂರ್ತಿ, ಸಂಪುಟ-೯, ಸಂಚಿಕೆ-೪, ಅಕ್ಟೋಬರ್-ಡಿಸೆಂಬರ್ ೧೯೮೦

೪. ಕೇರಿ: ಗ್ರಾಮನಾಮ ವಿವೇಚನೆ- ಚನ್ನಕ್ಕ ಎಲಿಗಾರ, ಸಂಪುಟ-೧೪, ಸಂಚಿಕೆ-೩, ಜೂನ್-ಸೆಪ್ಟಂಬರ್, ೧೯೮೫

೫. ಊರ ಹೆಸರುಗಳ ಕೊನೆಯ - ವರ - ವಾರ, ಎಂ.ಎಂ.ಕಲ್ಬುರ್ಗಿ, ಸಂಪುಟ-೯, ಸಂಚಿಕೆ-೧, ಜನವರಿ-ಮಾರ್ಚ್, ೧೯೮೦

೬. ಉಡುಪಿ ತಾಲೂಕಿನ ಸ್ಥಳನಾಮಗಳು: ಕೆಲವು ಪರಿಶೀಲನೆಗಳು ಕೆಮ್ತೂರು ರಘುಪತಿಭಟ್ಟ ಸಂಪುಟ-೧೪, ಸಂಚಿಕೆ-೩, ಜೂನ್-ಸೆಪ್ಟಂಬರ್, ೧೯೮೫ (ಪ್ರಸಾರಾಂಗ ಬೆಂ.ವಿ.ವಿ.)

೭. ಸ್ಥಳನಾಮ ಅಧ್ಯಯನ, ಆರ್ಕೆ. ರುಜುವಾತು, (ಸಂ. ಯು.ಆರ್.ಅನಂತಮೂರ್ತಿ) ೧೯೮೫, ಸೆಪ್ಟಂಬರ್.

೮. ಕಿ.ತಿ.ಗಿ. ವಾರ್ಗಿಕಗಳು, ಮಾರ್ಗ-೩, ಲೇ. ಡಾ. ಎಂ.ಎಂ.ಕಲ್ಬುರ್ಗಿ.

***

ಅಧ್ಯಾಯ ಮೂರು

# ಸ್ಥಳನಾಮಗಳ ವರ್ಗೀಕರಣ

ಸ್ಥಳನಾಮಗಳನ್ನು ಗಮನಿಸಿದಾಗ ಅವುಗಳಲ್ಲಿ ವೈವಿಧ್ಯಗಳನ್ನು ಕಾಣಬಹುದು. ಕೆಲವು ದೈವಗಳನ್ನು ಸೂಚಿಸಿದರೆ ಇನ್ನು ಕೆಲವು ಪ್ರಕೃತಿ, ಪ್ರಾಣಿ ಹೀಗೆ ಅನೇಕ ಅಂಶಗಳನ್ನು ಒಳಗೊಳ್ಳುತ್ತವೆ. ಇವುಗಳನ್ನು ಈಗಾಗಲೇ ಅಧ್ಯಯನ ಮಾಡಲಾಗಿದೆ. ಅನೇಕ ವಿದ್ವಾಂಸರು ತಮಗೆ ಸರಿ ಕಂಡ ರೀತಿಯಲ್ಲಿ ವರ್ಗೀಕರಣವನ್ನು ಮಾಡಿಕೊಂಡಿದ್ದಾರೆ.

ಇಂದಿನ ಸ್ಥಳನಾಮಗಳ ವಿಶ್ಲೇಷಣೆಯು ಮೂಲಭೂತವಾಗಿ ಇತಿಹಾಸ ಕಾಲೀನ ಸಾಮಗ್ರಿ ಭಾಷಾ ಶಾಸ್ತ್ರೀಯ ನಿಯಮಗಳು ಮುಂತಾದವುಗಳನ್ನು ಅವಲಂಬಿಸಿದೆ. ಈ ಅಧ್ಯಯನ ಪದ್ಧತಿ ಸಾಮಾನ್ಯವಾಗಿ ಎಲ್ಲಾ ಪ್ರದೇಶಗಳಿಗೂ ಅನ್ವಯವಾಗುವುದಾದರೂ ಒಂದು ಭೌಗೋಳಿಕ ಕ್ಷೇತ್ರದಿಂದ ಮತ್ತೊಂದು ಬೌಗೋಳಿಕ ಕ್ಷೇತ್ರದಲ್ಲಿ ಭಿನ್ನವಾಗಬಹುದು. ಆದುದರಿಂದ ಸ್ಥಳನಾಮಗಳ ಅಧ್ಯಯನ ಪದ್ಧತಿ ಮತ್ತು ವರ್ಗೀಕರಣದ ಕೆಲವು ಮೂಲಭೂತ ತತ್ವಗಳನ್ನು ತಿಳಿದುಕೊಳ್ಳಬೇಕಾಗುತ್ತದೆ.

ಸ್ಥಳನಾಮಗಳ ಅಧ್ಯಯನವು ಒಂದು ವ್ಯವಸ್ಥಿತ ಕ್ರಮದಲ್ಲಿ ನಡೆಯಬೇಕೆಂದು ಮೊದಲು ಸೂಚಿದವರು ಜೆ.ಜಿ.ಯಗ್ಲಿ. ಇವರು ೧೮೭೧ ರಲ್ಲಿ ಬರೆದ ತನ್ನ ಲೇಖನದಲ್ಲಿ ಸ್ಥಳನಾಮಗಳನ್ನು ಕುರಿತು ಸ್ಥಳನಾಮಗಳು ನಾವು ತಿಳಿದಿರುವಂತೆ ಯಾವುದೋ ಒಂದು ವಿನೋದ ಅಥವಾ ಅಚಾತುರ್ಯಗಳನ್ನೊಳಗೊಂಡಿರುವುದಿಲ್ಲ. ಸಾಮಾನ್ಯವಾಗಿ ಎಲ್ಲ ಸ್ಥಳನಾಮಗಳಲ್ಲೂ ವಿಶಿಷ್ಟ ಮತ್ತು ಸಾಮಾನ್ಯ ಎಂಬೆರಡು ಘಟಕಗಳಿರುತ್ತವೆ. ಇವೆರಡು ಒಟ್ಟುಗೂಡಿ ಆಯಾ ಸ್ಥಳಕ್ಕೆ ವಿಶೇಷವಾದ ಪ್ರಾಕೃತಿಕ ಇಲ್ಲವೆ ಸಾಂಸ್ಕೃತಿಕ ಹಿನ್ನೆಲೆಯ ಅರ್ಥವನ್ನು ಸೂಚಿಸುತ್ತದೆ. ಸ್ಥಳನಾಮಗಳಲ್ಲಿರುವ ಘಟಕಗಳ ಮೂಲ ಸ್ವರೂಪವನ್ನು ತಿಳಿದುಕೊಳ್ಳುವುದಕ್ಕೆ ನಾವು ಎರಡು ವಿಧಾನಗಳನ್ನು ಅನುಸರಿಸಬೇಕಾಗುತ್ತದೆ. ಎಂದು ಹೇಳಿದ್ದಾರೆ. ಇವರು ಸೂಚಿಸಿದ ಎರಡು ವಿಧಾನಗಳು ಈ ಕೆಳಗಿನಂತಿವೆ.

೧) ಆಯಾ ಭಾಗದ ಚಾರಿತ್ರಿಕ ಮತ್ತು ಅಲ್ಲಿಯ ಪ್ರಾದೇಶಿಕ ಭಾಷೆ ಉಪಭಾಷೆಗಳ ನೆರವಿನಿಂದ ವಿಶ್ವಸನೀಯವಾದ ಮತ್ತು ಖಚಿತವಾದ ಮೂಲ ಸ್ವರೂಪವನ್ನು ಗುರುತಿಸುವುದು. ಇದು ಒಂದು ವೇಳೆ ಸಾಧ್ಯವಿಲ್ಲದ್ದರೆ.

೨) ಆಯಾ ಸಾಂಸ್ಕೃತಿಕ ವಲಯದಲ್ಲಿಯ ಅದರ ಇತರ ಸಮಾನರೂಪವನ್ನು ಊಹಿಸುವುದು.

ಸ್ಥಳನಾಮ ಅಧ್ಯಯನಕ್ಕಾಗಿ ಇವೆರಡು ಮೂಲಭೂತ ತತ್ವವನ್ನು ಅವಲಂಬಿಸಿ ಆಯಾ ಪ್ರದೇಶದ ಸಾಂಸ್ಕೃತಿಕ ವೈಶಿಷ್ಟ್ಯಗಳ ಮೇರೆಗೆ ಈಗ ಅಧ್ಯಯನ ಮಾಡಲಾಗುತ್ತಿದೆ.

**ಸ್ಥಳನಾಮ ವರ್ಗೀಕರಣದ ಮಾದರಿಗಳು**

ಈ ವರೆಗೆ ಸ್ಥಳನಾಮ ಅಧ್ಯಯನಕಾರರು ವರ್ಗೀಕರಣದ ಮಾದರಿಗಳನ್ನು ವಿವಿಧ ರೀತಿಯಲ್ಲಿ ಪಟ್ಟಿ ಮಾಡಿದ್ದಾರೆ. ಅಂತಹ ಅಧ್ಯಯನಕಾರರಲ್ಲಿ ಪಾಶ್ಚಾತ್ಯ ವಿದ್ವಾಂಸರು ಇದ್ದಾರೆ ಕೆಲವು ಮಾದರಿಗಳನ್ನು ನೋಡುವ ಮೂಲಕ ಪ್ರಸ್ತುತ ಪ್ರದೇಶದ ವರ್ಗೀಕರಣ ಮುಂದುವರೆಯುತ್ತದೆ.

೧) ಲ್ಯಾಂಬರ್ಟ್ ಮತ್ತು ಮೇರಿಯಾ ಪೈ "ಅಮೇರಿಕನ್ ಪ್ಲೇಸ್ ನೇಮ್ಸ್" ಎಂಬ ಗ್ರಂಥದಲ್ಲಿ ಸ್ಥಳನಾಮಗಳನ್ನು ಹತ್ತು ವಿಧವಾಗಿ ವರ್ಗಿಕರಿಸಿದ್ದಾರೆ.

1. Descriptive Names
2. Associative Names
3. Possessive Names
4. Incident Names
5. Commendatory Names
6. Coined Names
7. Trasterandshift Names
8. Commemorative Names
9. Folk Etymology
10. Mistake Names

೨) ಜೆ.ಜೆ. ಯಗ್ಲಿಯವರು ಎರಡೇ ಪ್ರಕಾರಳನ್ನು ಹೇಳಿದ್ದಾರೆ

1) Natural Names
2) Cultural Names

೩) ಕೆ.ಪಿ.ಪದ್ಮನಾಭ ಮೆನನ್ ಇವರ "Some Place Names Of Malbar" (1932) ಎಂಬ ಲೇಖನದಲ್ಲಿ ಸ್ಥಳನಾಮಗಳನ್ನು ಹತ್ತು ವಿಧವಾಗಿ ವಿಂಗಡಿಸಿದ್ದಾರೆ.

1) Topographical Condition

2) Artificial condition

3) Native Soil Products

4) Temple

5) Ancient Military holds

6) Culture and Religios

7) Incidental

8) Trade Culture

9) Profeission of the people

10) Accidental Phenomena

೪) ಹಿರಾಲಾಲ್ "Indian Antiquary" (1931)ಯಲ್ಲಿ ಈ ರೀತಿ ವಿಂಗಡಿಸಿದ್ದಾರೆ.

೧) ಮರಗಳ ಬೆಳವಣಿಗೆಗಿಂತ ಮುಂಚಿತವಾಗಿ ಇಟ್ಟ ಹೆಸರುಗಳು

೨) ಪ್ರಾಣಿ ಪಕ್ಷಿಗಳಿಂದ ಬಂದ ಹೆಸರುಗಳು

೩) ದೇವತೆಗಳಿಂದ ಬಂದ ಹೆಸರುಗಳು

೫) ರಾಮಚಂದ್ರ ಚೆಟ್ಟಿಯಾರ್ ಅವರು "Place Names Selam District" ದಲ್ಲಿ ೬ ವಿಧ ವಿಂಗಡಿಸಿದ್ದಾರೆ.

1) Hill area

2) Water Source

3) Plains

4) Civic Life

5) Agriculture

6) Religions

೬) ಎಸ್.ಎಸ್. ರಾಮಚಂದ್ರಮೂರ್ತಿ ಅವರು "A Study of Telugu Place Names" ಎಂಬ ನಿಬಂಧದಲ್ಲಿ ಒಂಭತ್ತು ಬಗೆಯಲ್ಲಿ ವಿಂಗಡಿಸಿದ್ದಾರೆ.

೧) ಭೌತಿಕ ಮತ್ತು ಭೌಗೋಳಿಕ ಲಕ್ಷಣಗಳು ಇರುವಂತಹವು.

೨) ಸಸ್ಯಲೋಕದ ಹೆಸರುಗಳು

೩) ಪ್ರಾಣಿ ಜಗತ್ತಿನ ಹೆಸರುಗಳು

೪) ಧಾರ್ಮಿಕ ಸಂಗತಿಗಳು

೫) ಜನಾಂಗೀಯ ಅಂಶಗಳು

೬) ಚಾರಿತ್ರಿಕ

೭) ವ್ಯಾಪಾರ ವಾಣಿಜ್ಯ

೮) ಸಂಕೀರ್ಣ

೭) ಎಸ್.ಕೆ ಚಟರ್ಜಿ ಅವರ ವರ್ಗೀಕರಣ ಈ ರೀತಿ ಇದೆ.

೧) ಬುಡಕಟ್ಟು/ಜಾತಿಯ ಹೆಸರಿನಿಂದ

೨) ನೈಸರ್ಗಿಕ ಲಕ್ಷಣಗಳು

೩) ಧಾರ್ಮಿಕ ಸಂಗತಿಗಳು

೪) ವ್ಯಕ್ತಿ ಅಥವಾ ಘಟನೆ

೫) ಹಳೆಯ ಹೆಸರುಗಳಿಂದ

೭) ಎಚ್.ಡಿ.ಸಂಕಾಲಿಯಾ ಅವರ ವರ್ಗೀಕರಣ.

೧) ವ್ಯಕ್ತಿಯಾಧಾರಿತ

೨) ಘಟನೆ ಆಧಾರಿತ

೩) ಸಂಪ್ರದಾಯ ಆಧಾರಿತ

೪) ಹೂ ಹಣ್ಣು ಬೆಳೆಗಳಿಂದ

೫) ಪ್ರಾಣಿ ಪಕ್ಷಿಗಳಿಂದ

೬) ಹಳೆಯ ಹೆಸರುಗಳಿಂದ

೮) ಶಂಬಾ ಜೋಶೀಯವರು "ಎಡೆಗಳು ಹೇಳುವ ಕಂನಾಡಕತೆ" ಎಂಬ ಕೃತಿಯಲ್ಲಿ

೧) ಪ್ರಾಣಿಗಳಿಂದ

೨) ಗಿಡಗಂಟಿಗಳಿಂದ

೩) ದೇಹ ಅಂಗಾಂಗಳಿಂದ

೪) ಬಳಗದವರಿಂದ

೫) ಮನೆಗಳಿಂದ

೬) ದಿನಸುಗಳಿಂದ'

೭) ಬಣ್ಣಗಳಿಂದ

೮) ಬಂಗಾರದಿಂದ

೯) ಅಂಕೆಗಳಿಂದ

೧೦) ಗ್ರಹಾದಿಗಳಿಂದ

೧೧) ನೆಲದಿಂದ

೧೨) ಬೇಸಾಯದಿಂದ

೧೩) ಕಾಲದಿಂದ

೧೪) ಕೂಡಿಕೆಯಿಂದ

೧೫) ದೇವತಾದಿಗಳಿಂದ

೧೬) ಜನಗಳಿಂದ

೯) ದೇ ಜವರೇಗೌಡರವರ ವರ್ಗೀಕರಣ ಹೀಗಿದೆ:

೧. ವಸತಿ ಸೂಚಿಸುವ ಘಟಕಗಳು

೨. ಬೆಟ್ಟ, ಗುಡ್ಡ ಕಲ್ಲು ಸೂಚಕಗಳು

೩. ಭೌಗೋಳಿಕ ಲಕ್ಷಣ ಹೇಳುವಂತಹವು

೪. ಜಾತಿ ಧರ್ಮ ಸೂಚಕಗಳು

೫. ಸೈನಿಕರಿಗೆ ಸಂಬಂಧಿಸಿದಂತಹವು

೬. ಸಸ್ಯವಾಚಿ

೭. ಪ್ರಾಣಿ ಸೂಚಿ

೮. ಸಂಕೀರ್ಣಘಟಕಗಳು

೧೦) ಡಾ. ಎಂ.ಎಂ.ಕಲ್ಬುರ್ಗಿ ಅವರು "ನಾಮವಿಜ್ಞಾನದಲ್ಲಿ"

೧) ನಿಸರ್ಗ ವಾಚಿ ೨) ನಿರ್ಮಾಣ ವಾಚಿ ೩) ಜನಾಂಗವಾಚಿ
೪) ವೃತ್ತಿವಾಚಿ ೫) ಆದರ್ಶವಾಚಿ

ಹೀಗೆ ಅನೇಕ ವಿದ್ವಾಂಸರು ಸ್ಥಳನಾಮಗಳ ವರ್ಗೀಕರಣ ಮಾದರಿಗಳನ್ನು ನೀಡಿದ್ದಾರೆ ಪಾಶ್ಚಾತ್ಯ ವಿದ್ವಾಂಸರು ನೀಡಿದ ವರ್ಗಿಕರಣ ಮಾದರಿ ನಮ್ಮ ದೇಶಕ್ಕೆ ಹೊಂದಬಹುದು,

ಹೊಂದದಿರಬಹುದು. ಭೌಗೋಳಿಕವಾಗಿ, ಸಾಂಸ್ಕೃತಿಕವಾಗಿ, ವೈವಿಧ್ಯತೆಯಿರುವುದರಿಂದ ಇಂತಹ ವರ್ಗೀಕರಣ ನಮಗೆ ಅಗತ್ಯವೆಂದು ತೋರಲಾರದು.

ದೇಶಿಯ ವಿದ್ವಾಂಸರು ನೀಡಿದ ವರ್ಗಿಕರಣದಲ್ಲಿಯೂ ಅನೇಕ ಭಿನ್ನರೀತಿಯ ಮಾದರಿಗಳು ಕಂಡುಬರುತ್ತವೆ. ಇವುಗಳಲ್ಲಿ ಕೆಲವು ದೇಶೀಯ ನೆಲದಲ್ಲಿಯ ವಿವಿಧ ರೀತಿಯಲ್ಲಿ ಪ್ರಾದೇಶಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಬದಲಾವಣೆಗಳು ಇರುವದರಿಂದ ಇಂತಹ ವರ್ಗೀಕರಣ ಆಯಾ ಪ್ರಾದೇಶಿಕ ಪರಿಸರಕ್ಕೆ ಸರಿಹೊಂದುತ್ತದೆ. ಭಾರತದಲ್ಲಿ ಅಷ್ಟೆ ಅಲ್ಲದೇ ಒಂದೇ ಭಾಷೆಯನ್ನೊಳಗೊಂಡ ಕರ್ನಾಟಕದಲ್ಲಿ ಇಂತಹ ಭಿನ್ನತೆಯನ್ನು ಕಾಣಬಹುದು ಮಂಗಳೂರು(ದ.ಕ) ಭಾಗದ ಭೌಗೋಳಿಕ ಹಾಗೂ ಸಾಂಸ್ಕೃತಿಕ ಪರಿಸರ ಉಳಿದ ಕರ್ನಾಟಕ ಭಾಗಕ್ಕಿಂತ ಭಿನ್ನವಾಗಿರುವದರಿಂದ ಅಲ್ಲಿನ ವರ್ಗೀಕರಣ ಮಾದರಿ ಭಿನ್ನ ಮಾದರಿಯಾಗಿದೆ.

ಈ ದೃಷ್ಟಿಯಿಂದ ಒಂದು ಪ್ರದೇಶದ ವರ್ಗೀಕರಣವು ಆ ಪ್ರದೇಶಕ್ಕೆ ಮಾತ್ರ ಹೊಂದಬಹುದು. ಇದಕ್ಕೊಂದು ಸಾಮಾನ್ಯ ನಿಯಮವನ್ನು (Common Rule) ಹೇಳಲಾಗುವುದಿಲ್ಲ. ಪಾಶ್ಚಾತ್ಯ ವರ್ಗೀಕರಣವಂತೂ ಇದರಿಂದ ತುಂಬಾ ದೂರ ಉಳಿಯುತ್ತವೆ. ದ್ವಿಭಾಷಿಕ ವಲಯದಲ್ಲಿ ಇಂತಹ ಮಾದರಿ ವಿಶೇಷವಾಗಿ ತೋರುತ್ತದೆ. ಮಾದರಿಗಾಗಿ ಮೇಲಿನ ವರ್ಗೀಕರಣದ ವಿವಿಧ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಬೀಳಗಿ ತಾಲೂಕಿನ ಸ್ಥಳನಾಮಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ.

***

*ಅಧ್ಯಾಯ ನಾಲ್ಕು*

# ಬೀಳಗಿ ತಾಲೂಕಿನ ಸ್ಥಳನಾಮಗಳು

## ಬೀಳಗಿ ತಾಲೂಕಿನ ಸ್ವರೂಪ

ಬೀಳಗಿ, ಬಾಗಲಕೋಟ ಜಿಲ್ಲೆಯ ಒಂದು ತಾಲೂಕು. (ಬಾಗಲಕೋಟಗೆ) ಜಿಲ್ಲೆಗೆ ಇದು ವಾಯವ್ಯ ದಿಕ್ಕಿಗಿದೆ. ಬೀಳಗಿ ತಾಲೂಕು ಕೃಷ್ಣ-ಘಟಪ್ರಭೆಯ ಪೆರ್ದೊರೆಯ ನಾಡು, ಅನೇಕ ಕಾರಣಕ್ಕೆ ಅಂದೂ ಇಂದೂ ಹೆಸರು ವಾಸಿಯಾಗಿದೆ. ತಾಲೂಕಿನ ಗ್ರಾಮಗಳಾದ ಗಿರಿಸಾಗರ ಮತ್ತು ನಾಗರಾಳ ಸೀರೆಗಳನ್ನು ನೇಯುವುದಕ್ಕೆ ಪ್ರಸಿದ್ಧವಾಗಿವೆ. ಕುಂದರಗಿಯ ಉಣ್ಣೆ (ಕುರಿಯ ಉಣ್ಣೆ) ಕಂಬಳಿಗಳು, ಗಲಗಲಿಯ ಪ್ರಖ್ಯಾತ ಪೇಡೆ (ಪಿಕ್ಕಾ ಪೇಡೆ), ಕಬ್ಬಿಗೆ ಇಡೀ ತಾಲೂಕು ಪ್ರಸಿದ್ಧವಾಗಿದೆ.

ಸಾಂಸ್ಕೃತಿಕವಾಗಿ ಮತ್ತು ಆರ್ಥಿಕವಾಗಿ ಸಂಪದ್ಭರಿತವಾದ ಬೀಳಗಿ ಭೌಗೋಳಿಕವಾಗಿಯೂ ವೈವಿಧ್ಯ-ವೈಶಿಷ್ಟ್ಯಗಳಿಂದ ಕೂಡಿದೆ.

ತಾಲೂಕಿನ ಐತಿಹಾಸಿಕ ಹಾಗೂ ಆಧುನಿಕ ನೋಟಗಳಲ್ಲಿ ಭೌಗೋಳಿಕ ಅಂಶ ಪ್ರಭಾವಿಯಾಗಿ ಛಾಪು ಒತ್ತಿರುವುದನ್ನು ನಾವು ಗುರುತಿಸಬಹುದು.

ಕರ್ನಾಟಕ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಕಾಲ ಘಟ್ಟದಲ್ಲಿ 'ಬೀಳಗಿ' ತಾಲೂಕು ತನ್ನದೇ ಆದ ಹೆಜ್ಜೆ ಗುರುತನ್ನು ಮೂಡಿಸಿದೆ. ಅಂತೆಯೇ ಕರ್ನಾಟಕದ ವೈವಿಧ್ಯಮಯ ಸಾಂಸ್ಕೃತಿಕ ದಾಖಲೆಗಳಲ್ಲಿ ತನ್ನ ಛಾಪನ್ನು ತೋರಿ "ಕೃಷ್ಣಾ ಮೇಲ್ದಂಡೆ ಯೋಜನೆ" ಯ ಆಲಮಟ್ಟಿ ಆಣೆಕಟ್ಟಿನ ಹಿನ್ನೀರಿನಲ್ಲಿ ಭಾಗಶಃ ಮುಳುಗಡೆಯಾದ ತಾಲೂಕಾಗಿದೆ.

ಈ ತಾಲೂಕಿನಲ್ಲಿ ಒಟ್ಟು ೪೪ ಗ್ರಾಮಗಳು ಹಿನ್ನೀರಿನಿಂದ ಮುಳುಗಡೆಯಾಗಿದ್ದು ಈಗ ಸರಕಾರದಿಂದ ಪುನರ್ವಸತಿ ಕೇಂದ್ರವಾಗಿ ಮಾರ್ಪಟ್ಟು ತಮ್ಮ ಮೂಲ ಸ್ಥಳನಾಮವನ್ನೂ ಹಿಂದಿನ ಸಂಸ್ಕೃತಿಯನ್ನೂ ಮುಂದುವರಿಸಿವೆ.

ಬೀಳಗಿ ತಾಲೂಕಿನ "ಗಲಗಲಿ", "ಗಾಲವ" ಋಷಿಗಳು ತಪಸ್ಸನ್ನಾಚರಿಸಿದ ಸ್ಥಳವಾದರೆ, "ಚಿಕ್ಕ ಸಂಗಮ"-ಅಣ್ಣ ಬಸವಣ್ಣನಿಗೆ ಜಾತವೇದ ಮುನಿಗಳು ದೀಕ್ಷೆಕೊಟ್ಟು ಅಧ್ಯಯನ ಮಾಡಿದ ಸ್ಥಳವಾಗಿದೆ ಮತ್ತು ಬೀಳಗಿಯ "ಸಿದ್ದಪ್ಪನಕೊಳ್ಳ" ಎಂದೇ ಖ್ಯಾತಿಯಾಗಿರುವ ಸಿದ್ದೇಶ್ವರ ದೇವಾಲಯ ಬೀಳಗಿಯ ಸಾಂಸ್ಕೃತಿಕ ವೈಭವಕ್ಕೆ ಹಿಡಿದ ಕನ್ನಡಿಯಾಗಿದೆ. ಇಲ್ಲಿ ಖ್ಯಾತ ನಾಟಕಾರರಾದ "ಕಂದಗಲ್ಲ ಹನುಮಂತರಾಯರು, ಕಾದಂಬರಿಕಾರರಾದ ಶ್ರೀ ಕೃಷ್ಣಮೂರ್ತಿ ಪುರಾಣಿಕ, ಖ್ಯಾತ ಶಹನಾಯಿ ವಾದಕ ಸನಾದಿ ಅಪ್ಪಣ್ಣ" ಮುಂತಾದ ವ್ಯಕ್ತಿಗಳಿಂದ ಸಾಹಿತ್ಯಿಕ, ಸಾಂಸ್ಕೃತಿಕ ಹಿರಿಮೆಯನ್ನು ಸಾಧಿಸಿದೆ.

**ಭೌಗೋಳಿಕ ಹಿನ್ನೆಲೆ**

ಬಾಗಲಕೋಟ ಜಿಲ್ಲೆ ಆರು ತಾಲೂಕುಗಳಿಂದ ಕೂಡಿದ್ದು ಬೀಳಗಿಯೂ ಒಂದು. ಐತಿಹಾಸಿಕವಾಗಿ ಮತ್ತು ಭೌಗೋಳಿಕವಾಗಿ ಗಮನಾರ್ಹವಾದ ಈ ತಾಲೂಕು ಕರ್ನಾಟಕದ ಉತ್ತರದ ತುದಿಯಲ್ಲಿದೆ. ತಾಲೂಕಿನ ಉತ್ತರಕ್ಕೆ ಪ್ರವಹಿಸುತ್ತಿರುವ "ಉತ್ತರ ಕರ್ನಾಟಕ ಜೀವನದಿ" ಎಂದೇ ಖ್ಯಾತವಾಗಿರುವ, "ಪೆರ್ದೊರೆ" ಎಂದು ಶಾಸನಗಳಲ್ಲಿ ಕರೆಯಲಾದ, ಜನಪದರಿಂದ "ಹಿರಿಹೊಳಿ" ಎಂದು ಕರೆಯಲ್ಪಡುವ, "ಕೃಷ್ಣಾನದಿ". ಈ ನದಿಯು ಅಖಂಡ ಜಿಲ್ಲೆಯಾಗಿದ್ದ ಬಿಜಾಪುರದಿಂದ ಬಾಗಲಕೋಟಯನ್ನು ಇಬ್ಭಾಗಿಸಿದೆ. ದಕ್ಷಿಣಕ್ಕೆ ಘಟಪ್ರಭೆ, ಪೂರ್ವಕ್ಕೆ ಕೃಷ್ಣೆ-ಘಟಪ್ರಭೆಯರ ಸಂಗಮವಾದ ಸಾಂಸ್ಕೃತಿಕ ಸ್ಥಳ "ಚಿಕ್ಕಸಂಗಮ". ಪಶ್ಚಿಮಕ್ಕೆ ಮುದೋಳ-ಜಮಖಂಡಿ ತಾಲೂಕುಗಳಿವೆ. ಜಿಲ್ಲಾ ಕೇಂದ್ರದಿಂದ ೨೮ ಕಿ.ಮೀ ದೂರದಲಿರುವ ಈ ಬೀಳಗಿ ತಾಲೂಕಿನಲ್ಲಿ ಸುಮಾರು ೬೫ ಹಳ್ಳಿಗಳಿದ್ದು ಒಟ್ಟು ವಿಸ್ತೀರ್ಣ ೧೯೩೧೫೪.೩೧ ಚದರ ಹೆಕ್ಟೇರುಗಳು ಇದ್ದು ಸಮುದ್ರ ಮಟ್ಟದಿಂದ ೫೭೯ ಮೀಟರ್ ಎತ್ತರವಾಗಿದೆ.

ಆಡಳಿತದ ಅನುಕೂಲಕ್ಕಾಗಿ ಈ ತಾಲೂಕನ್ನು ೨ ಹೋಬಳಿಗಳಾಗಿ ವಿಂಗಡಿಸಲಾಗಿದೆ.

೧. ಬೀಳಗಿ
೨. ಅನಗವಾಡಿ

ಇಲ್ಲಿ ೬೪ ಗ್ರಾಮಗಳಿದ್ದು ಇವುಗಳನ್ನು ಕರ್ನಾಟಕ ಸರಕಾರ ಪ್ರಕಟಿಸಿದ "ಗ್ರಾಮಸೂಚಿ"ಯಲ್ಲಿರುವಂತೆ ಅನುಬಂಧದಲ್ಲಿ ನೀಡಲಾಗಿದೆ.

ಬೀಳಗಿ ತಾಲೂಕಿನ ಭೂರಚನೆ ಅತ್ಯಂತ ಪುರಾತನವಾದದ್ದು ಈ ತಾಲೂಕಿನ ಹೆರಕಲ್ಲ, ಬೀಳಗಿ, ಅರಕೇರಿ, ಕುಂದರಗಿಗಳಲ್ಲಿ ನೂತನ ಶಿಲಾಯುಗಕ್ಕೆ ಸೇರಿದ ಪಳೆಯುಳಿಕೆಗಳು ಸಿಕ್ಕಿವೆ. ಘಟಪ್ರಭಾ ನದಿಯು ದಕ್ಷಿಣದಲ್ಲಿರುವ ಬೆಟ್ಟಶ್ರೇಣಿಗಳ ಸರಣಿ ತಾಲೂಕಿನ ಚಿಕ್ಕಲಗುಂಡಿ-ಅರಕೇರಿ ಸಮೀಪ ಪ್ರಾರಂಭವಾಗಿ ಬೀಳಗಿಯ ಪೂರ್ವಾಗ್ನೇಯ ಭಾಗಕ್ಕೂ ಹರಡಿದೆ, ಇಲ್ಲಿಂದ ಕವಲಾಗಿ ಕೃಷ್ಣೆ-ಘಟಪ್ರಭಾದ ಸಂಗಮದವರೆಗೆ ಹಬ್ಬಿರುತ್ತದೆ..

**ಜೀವನದಿಗಳು**

ಪೆರ್ದೊರೆ, ಹಿರಿಹೊಳೆಯಾದ ಕೃಷ್ಣೆಯ ಮಹಾರಾಷ್ಟ್ರದ-ಮಹಾಬಳೇಶ್ವರದಲ್ಲಿ ಹುಟ್ಟಿ ಹರಿಯುತ್ತಾ ಬೆಳಗಾವಿ ಜಿಲ್ಲೆಯಲ್ಲಿ ಪ್ರವಹಿಸಿ, ಬಾಗಲಕೋಟ ಜಿಲ್ಲಿಯನ್ನು ಜಮಖಂಡಿಯ

ಮೂಲಕ ಪ್ರವೇಶಿಸಿ ಬೀಳಗಿ ತಾಲೂಕಿನ ಕೋಲೂರು, ಮುಂಡಗನೂರುನಿಂದ ಪ್ರವೇಶಿಸಿ, ಗುಂಡನಪಲ್ಲೆ ಬಳಿ ಇಬ್ಭಾಗವಾಗಿ ೮ ಕಿ.ಮೀ ಹರಿದು ತಾಲೂಕಿನ ಮನಗೂರು ಮುಂದೆ ಒಂದಾಗಿ ಹರಿಯುತ್ತದೆ. ಇದರ ನಡುವಿನ ದ್ವೀಪಕ್ಕೆ "ನಡುಗಡ್ಡೆ" ಎಂದು ಕರೆಯುತ್ತಾರೆ. ಹೀಗೆ ಸುಮಾರು ೪೦ ಕಿ.ಮೀ ಪ್ರವಹಿಸುವ 'ಹಿರಿಹೊಳೆ'ಯು ಮುಂದೆ ಗುಲಬರ್ಗಾ, ರಾಯಚೂರು ಮುಖಾಂತರ ಆಂಧ್ರಪ್ರದೇಶಕ್ಕೆ ಪ್ರವಹಿಸುತ್ತದೆ. ಘಟಪ್ರಭಾ ನದಿ ಬೆಳಗಾವಿ ಜಿಲ್ಲೆಯ ಪಶ್ಚಿಮ ಘಟ್ಟದಲ್ಲಿ ಉಗಮಿಸಿ ಪೂರ್ವಾಭಿಮುಖವಾಗಿ ಹರಿದು ತಾಲೂಕಿನ 'ಚಿಕ್ಕ ಸಂಗಮ'ದ ಬಳಿ ಕೃಷ್ಣೆಯನ್ನು ಕೂಡುತ್ತದೆ. ತಾಲೂಕಿನ ಕಾತರಕಿ ಬಳಿ ಪ್ರವೇಶಿಸುವ ನದಿ ಸುಮಾರು ೪೫ ಕಿ.ಮೀಗಳಷ್ಟು ದೂರ ಪ್ರವಹಿಸುತ್ತದೆ.

**ಹವಾಗುಣ**

ಉಷ್ಣವಲಯಕ್ಕಿಂತ ಬೇರಾದ ಹವಾಮಾನ ಇಲ್ಲಿದೆ, ಒಣ ಮತ್ತು ಆರೋಗ್ಯಕರವಾದ ಹವಾಮಾನ, ಮುಂಗಾರಿನ ಅವಧಿಯಾದ ಜೂನದಿಂದ ಸೆಪ್ಟಂಬರದವರೆಗೆ ಹವಾಮಾನ ಆರ್ದ್ರವಾಗಿರುತ್ತದೆ ತಾಲೂಕಿನಲ್ಲಿ ಮಳೆಯ ವಾರ್ಷಿಕ ಪ್ರಮಾಣ ೫೫೦ ಮೀ.ಮೀ. ವಾರ್ಷಿಕ ಮಳೆಯು ಶೇ. ೨೦%ರಷ್ಟು ಜೂನದಿಂದ ಸಪ್ಟಂಬರ್ ತಿಂಗಳುಗಳಲ್ಲಿ ಆಗುತ್ತದೆ.

ತಾಲೂಕಿನಲ್ಲಿ ಅರಣ್ಯಸಂಪತ್ತು, ಗುಡ್ಡ, ಬೆಟ್ಟಗಳಲ್ಲಿ, ದಟ್ಟವಾದ ಅರಣ್ಯ ಅಲ್ಲಲ್ಲಿ ಬಿಟ್ಟರೆ ಒಟ್ಟಾರೆಯಾಗಿ ಬಯಲು ಪ್ರದೇಶವಿದೆ, ತಾಲೂಕಿನ ಒಟ್ಟು ಅರಣ್ಯ ಪ್ರದೇಶವು ೧೯೦೮೦ ಚ.ಕಿ.ಮೀ ಇದೆ. ಅಲ್ಲಿ ಬೆಳೆಯುವ ಮರಗಳೆಂದರೆ ಬೇವು, ಹುಣಸೆ, ಮಾವು, ಜಾಲಿ, ನೀಲಗಿರಿ, ತುಮ್ರ ಅಲ್ಲದೆ ಪ್ರಾಣಿಸಂಪತ್ತು ಈ ಗುಡ್ಡಗಳಲ್ಲಿ ಸಾಮಾನ್ಯ ಮೃಗಗಳನ್ನು ಹೊಂದಿದೆ.

**ಸಾಂಸ್ಕೃತಿಕ ಪರಂಪರೆ**

ಪ್ರತಿಯೊಂದು ನಾಡಿಗೂ ಆ ನಾಡಿನಲ್ಲಿರುವ ಪ್ರತಿಯೊಂದು ಪ್ರದೇಶಕ್ಕೂ ತನ್ನದೇ ಆದ ಉಜ್ವಲ ಪರಂಪರೆ ಇದ್ದೇ ಇರುತ್ತದೆ. ನಮ್ಮ ಪೂರ್ವಜರ ಬದುಕು-ಆದರ್ಶ, ಆಚರಣೆ, ಸಂಪ್ರದಾಯ, ಮೌಲ್ಯ, ಧರ್ಮ ಸಮಾಜ ಹೀಗೆ ಮನುಷ್ಯನ ಬದುಕಿನ ಸಮಸ್ತ ಚಟುವಟಿಕೆಗಳೆಲ್ಲವು ತುಂಬಿಕೊಂಡಿರುತ್ತವೆ. ಪರಂಪರೆಯ ನಿರ್ಮಾಣ ಮತ್ತು ಮುಂದುವರಿಕೆ ಈ ಉಭಯ ಪ್ರಕ್ರಿಯೆಗಳು ಕಾಲದಿಂದ ಕಾಲಕ್ಕೆ ಮುಂದುವರಿಯುತ್ತವೆ.

"ಪರಂಪರೆ ಎನ್ನುವುದು ಸ್ಥಾವರವಲ್ಲ, ಜಂಗಮ, "ಸ್ಥಾರವಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎನ್ನುವಂತೆ ಜಂಗಮ ಬೆಳೆಯುತ್ತದೆ, ಬೆಳೆಯುವುದು ಮತ್ತು ಬೆಳಕಾಗಿಸುವುದು ಜಂಗಮದ ಲಕ್ಷಣವಾಗಿದೆ. ಇದು ಪರಂಪರೆಯ ಲಕ್ಷಣವೂ ಹೌದು. ಅಂತೆಯೇ ಪರಂಪರೆಯ ಸದಾ ಚಲನಶೀಲತೆ ಮತ್ತು ಜೀವಂತಿಕೆಯನ್ನು ಹೊಂದಿರುತ್ತದೆ".[೩]

ಬೀಳಗಿ ತಾಲೂಕಿನ ಸಾಂಸ್ಕೃತಿಕ ಪರಂಪರೆಯನ್ನು ನಾವು ಶಾಸನಗಳಿಂದ, ಸಾಹಿತ್ಯದಿಂದ ತಿಳಿದಂತೆ ಸ್ಥಳನಾಮಗಳಿಂದಲೂ ಮಾಹಿತಿ ದೊರೆಯುತ್ತವೆ, ದೊರೆತಿರುವ ಶಾಸನಗಳನ್ನು ೧. ರಾಜಕೀಯ, ೨.ಧಾರ್ಮಿಕ, ೩.ಸಾಮಾಜಿಕ ೪.ಸಾಹಿತ್ಯಿಕ ಎಂದು ವಿಂಗಡಿಸಬಹುದು.

ಈ ಪ್ರದೇಶವು ಕಲ್ಯಾಣ ಚಾಲುಕ್ಯರ ಅರಸನಾದ ಜಗದೇಕಮಲ್ಲ (ಕ್ರಿಶ ೧೦೨೪) ಹಾಗೂ ಸೋಮೇಶ್ವರ (ಕ್ರಿಶ ೧೦೨೪ರಿಂದ), ಯಾದವ ಸಿಂಘಣ (ಕ್ರಿ.ಶ. ೧೨೪೨) ಹಾಗೂ ಆದಿಲ್‌ಶಾಹಿ ೨ನೇ ಇಬ್ರಾಹಿಂ ಅವರ ಆಡಳಿತಕ್ಕೆ ಒಳಪಟ್ಟಿದ್ದು ಎಂದು ಶಾಸನಗಳಿಂದ ತಿಳಿಯುತ್ತದೆ. ೨ನೇ ಇಬ್ರಾಹಿಂ ಅಧಿಕಾರಿ ಯಾಕೂತ್‌ಖಾನ್‌ನ ಅಧೀನದ ಬೀಳಗಿ ಸಮ್ಮತ್ ಮೊಬಾಸೆ ಖಂಡೆರಾವ ಪಂಡಿತ, ಮಹೇದ ಪಂಡಿತರ ಮಗ ಬಿಸಾಜಿ ಪಂಡಿತ ಮೊದಲಾದ ರಾಜಕೀಯ ವ್ಯಕ್ತಿಗಳು ರಾಜ್ಯಾಡಳಿತ ನಡೆಸಿದ್ದಾರೆ.

ಇದಕ್ಕೆ ಪುಷ್ಟಿಕೊಡುವಂತೆ ಹೆಗ್ಗೂರು ಶಾಸನ ಕ್ರಿಶ ೧೦೨೪ದಿಂದ ಬೀಳಗಿ ತಾಲೂಕಿನ ರಾಜಕೀಯ ಇತಿಹಾಸಕ್ಕೆ ಒಂದು ಸಾವಿರ ವರುಷದಷ್ಟು ಪ್ರಾಚೀನವಾದ ಇತಿಹಾಸವಿರುವುದನ್ನು ತಿಳಿಸುತ್ತದೆ.

"ಗಲಗಲಿ, "ಕೊಪ್ಪ" ಶಾಸನಗಳಲ್ಲಿ ಕೂಡಾ ಪ್ರಾಚೀನ ಕರ್ನಾಟಕದ ರಾಜಕೀಯ ವಲಯಗಳಾದ "ತರ್ದವಾಡಿ" "ಕಿಸುನಾಡು ೩೦"ರ ಉಲ್ಲೇಖಗಳು ದೊರೆಯುತ್ತವೆ.

೧೮ನೇ ಶತಮಾನದಲ್ಲಿ ಬೀಳಗಿ "ಸಮ್ಮತ್" ಎಂದು (ಸಮ್ಮತ್=ಒಪ್ಪಿಕೊಳ್ಳು) ಪ್ರಸಿದ್ಧಿ ಪಡೆದಿದ್ದಿತು ಎಂದು ಬೀಳಗಿಯ (ಕ್ರಿಶ ೧೭೦೮) ಶಾಸನದ ಮೂಲಕ ತಿಳಿದುಬರುತ್ತದೆ.

ಬೀಳಗಿಗೆ ರಾಜಕೀಯ ಪರಂಪರೆ ಇರುವಂತೆ ಧಾರ್ಮಿಕ ಪರಂಪರೆಯೂ ಇರುವುದನ್ನು ಶಾಸನಗಳು ತಿಳಿಸುತ್ತವೆ. ಈ ಪ್ರದೇಶದಲ್ಲಿ ಪ್ರಧಾನ ಹಾಗೂ ಪ್ರಭಾವಶಾಲಿಯಾಗಿದ್ದುದು "ಶೈವಧರ್ಮ" "ಸ್ವಯಂಭೂ ನಗರೇಶ್ವರ (ವಿಕ್ರಮಪುರ)" ಗುಂಡನಾಥದೇವ", (ಕೋಲೂರು ಶಾಸನ.) ರೆಬ್ಬಲೇಶ್ವರ (ಹೆಗ್ಗೂರ) ಕಲಿದೇವಸ್ವಾಮಿ, ಸೋಮೇಶ್ವರ (ಕೊಪ್ಪ) ಖರೇಶ್ವರ (ಢವಳೇಶ್ವರ) ಮೊದಲಾದ ಶೈವ ದೇವಾಲಯಗಳು ಶೈವ ಧರ್ಮದ ದಟ್ಟವಾದ ಪ್ರಭಾವ ಸೂಚಿಸುತ್ತವೆ.

ಬಾಡಗಿ ಗ್ರಾಮದ "ಕೇಶವ ದೇವಾಲಯ" ೧೨೨೩-೪೨ರಲ್ಲಿ ಈ ಪ್ರದೇಶದಲ್ಲಿದ್ದ ವೈಷ್ಣವ ಧರ್ಮದ ಅಸ್ತಿತ್ವವನ್ನು ಸೂಚಿಸುತ್ತದೆ. ಬಾಡಗಿಯ ಅಗ್ರಹಾರದ ಮಹಾಜನರು ವಿದ್ಯಾವಂತರಾಗಿದ್ದು ಈ ಪ್ರದೇಶದಲ್ಲಿ ವೈಷ್ಣವ ಧರ್ಮ ಸಂವರ್ಧನೆಗೊಳ್ಳಲು ನೆರವಾಗಿದ್ದರು ಎಂಬುದು ತಿಳಿದುಬರುತ್ತದೆ.

೧೨ನೇ ಶತಮಾನದ ಯಡಹಳ್ಳಿ ಶಾಸನವು[೪] ಸೊನ್ನಲಿಗೆ ಸಿದ್ದರಾಮನನ್ನು ಶಿವಶರಣರನ್ನು ಬಾಯ್ತುಂಬ ಹೊಗಳಿ ಬರೆದ ಶಾಸನವಾಗಿದೆ. ಇದರಿಂದ ವೀರಶೈವ ಶಿವಶರಣರ ಪ್ರಭಾವ ದಟ್ಟವಾಗಿದ್ದು ತಿಳಿದುಬರುತ್ತದೆ.

ಹೀಗೆ ಬೀಳಗಿ ತಾಲೂಕು ಪ್ರಾಚೀನ ಕಾಲದಲ್ಲಿ ಶೈವ ವೀರಶೈವ ಧರ್ಮಗಳ ಹಾಗೂ ಮಹಾಮುನಿಗಳ ಶಿವಶರಣರ, ತಪೋನಿಷ್ಠರ ಪುಣ್ಯಭೂಮಿ ಎನಿಸಿದ್ದಿತು. ಸಾಮಾಜಿಕ ವೀರ ಮತ್ತು ದಾನ ಪ್ರಾಚೀನ ಕಾಲದ ಪರಮ ಮೌಲ್ಯಗಳಾಗಿದ್ದವು. ಅಲ್ಲದೆ ಮೌಲ್ಯಗಳಿಗೆ ಅಪಾರ ಗೌರವವು ಇದ್ದಿತು. ಯುದ್ಧದಲ್ಲಿ ಹೋರಾಡಿ ಮಡಿಯುವುದರೊಂದಿಗೆ "ವೀರಸ್ವರ್ಗ" "ಸದ್ಗತಿ" ಸಿಗುವುದೆಂಬ ಬಲವಾದ ನಂಬಿಕೆ ಅಂದಿನ ವೀರರದಾಗಿದ್ದಿತು. ಅಂತೆಯೇ ಯುದ್ಧವೀರನ

ಮಡದಿ ಮಡಿದ ತನ್ನ ಪತಿಯ ಹೆಸರಿನಲ್ಲಿ ಚಿತಾ(ಅಗ್ನಿ) ಪ್ರವೇಶ ಮಾಡಿ ಪ್ರಾಣಾರ್ಪಣೆ ಮಾಡುತ್ತಿದ್ದರು. ಇದು ಕೂಡಾ "ಮೋಕ್ಷ" "ಸದ್ಗತಿ" ದೊರೆಯುತ್ತದೆ ಎಂಬುದರ ನಂಬಿಕೆಯಾಗಿದೆ. ಇಂತಹ "ವೀರಮೌಲ್ಯ"ವನ್ನು ತಿಳಿಸುವ ವೀರಗಲ್ಲು, ಮಾಸ್ತಿಕಲ್ಲುಗಳು ಬೀಳಗಿ ತಾಲೂಕಿನಲ್ಲಿ ದೊರೆಯುತ್ತವೆ.

ಆಲಗುಂಡಿ (ಕ್ರಿ.ಶ. ೧೫ನೇ ಶತಮಾನ) "ವೀರ, ಮಾಸ್ತಿಕಲ್ಲು" ಬಸವಣ್ಣನೆಂಬ ಹೆಸರಿನವನು ಯುದ್ಧವೀರನಾಗಿ ಮಡಿದ ತರುವಾಯ ಮಡದಿ ಸಹಗಮನ ಮಾಡಿದ ವಿವರಣೆ ನೀಡುತ್ತದೆ. "ಊರಮಿವು" ಎಂದರೆ ದಾಳಿಕೋರರು ಸಂಪತ್ತು ದೋಚಿ ಊರಿಗೆ ಬೆಂಕಿ ಹಚ್ಚುತ್ತಿದ್ದರು. ಅಲ್ಲದೆ ಗೋವುಗಳನ್ನು ಕದ್ದರೆ, "ತುರುಗೊಳ್" ಎಂದೂ ಅಮಾಯಕ ಹೆಣ್ಣುಮಕ್ಕಳಿಗೆ ಆಕ್ರಮಣ ಮಾಡಿದರೆ "ಪೆಂಡಿರುಡೆಯರ್ಚೆ", ಹೆಣ್ಣು ಆರ್ತನಾದ ಮಾಡಿದರೆ "ಪೆಣ್ಬಯ್ಯಲ್" ಎನ್ನಲಾಗುತ್ತದೆ. ಗಲಗಲಿ ಶಾಸನದಲ್ಲಿ "ಪೆಣ್ಬುಯ್ಯಲ್" ಬಗೆಗೆ ವಿವರಣೆ ದೊರೆಯುತ್ತದೆ.

ದಾನ ಮತ್ತೊಂದು ಮೌಲ್ಯವಾಗಿದ್ದರಿಂದ ಬೀಳಗಿ ತಾಲೂಕಿನಲ್ಲಿ ಧಾರ್ಮಿಕ ಕಾರ್ಯಗಳ ಉಲ್ಲೇಖ ಶಾಸನಗಳಲ್ಲಿ ಕಂಡುಬರುತ್ತದೆ. ಬೀಳಗಿ ಶಾಸನ (೧೫೮೫,೧೬೦೫,೧೬೯೫-೯೬)ದಲ್ಲಿ ಈಗಿನ ಬೀಳಗಿಯ ಆಗ-ಬಿಳಗಿ (ಈಗ ಹ್ರಸ್ವ>ದೀರ್ಘವಾಗಿದೆ). ಬೀಳಗಿ "ರಾಯರಬಾವಿ" ಯನ್ನು ನಿರ್ಮಾಣ ಮಾಡಿದ ವಿವರಣೆ ದೊರೆಯುತ್ತದೆ. ಈಗಲೂ ಕೂಡಾ ಖ್ಯಾತಿಯನ್ನು ಹೊಂದಿದೆ.

ಹೆಗ್ಗೂರು ಶಾಸನದಲ್ಲಿ ("ಪೆರ್ಗೂರು" ಎಂಬುದು) ರೆಬ್ಬಲೇಶ್ವರ ದೇವಾಲಯ ಹಾಗೂ ವಿದ್ಯೆಗೆ ಭೂಮಿ ದಾನ ಮಾಡಿದ ವಿವರಣೆ ಇದೆ.

**"ಸ್ಥಳನಾಮಗಳ ಸಾಮಾಜಿಕ ಅಧ್ಯಯನ"**

ಸಾಮಾಜಿಕ ಅಂಶಗಳನ್ನು ತಿಳಿಸುವ ಸ್ಥಳನಾಮಗಳಿಗೆ ಸಾಮಾಜಿಕ ಸ್ಥಳನಾಮಗಳೆಂದು ಕರೆಯುತ್ತೇವೆ. ವ್ಯಕ್ತಿ, ಜಾತಿ, ವೃತ್ತಿ, ವರ್ಗ, ದೈವಿಕ ವಿಷಯಗಳು ಸಾಮಾಜಿಕ ಅಂಶಗಳಲ್ಲಿ ಮುಖ್ಯವಾದವುಗಳು

ಮಾನವನು ತನ್ನ ಸಾಂಸ್ಕೃತಿಕ ಬದುಕಿನಲ್ಲಿ ಆತನ ಆಚಾರ-ವಿಚಾರ-ಭಾಷೆ, ಧರ್ಮ ಉಡುಗೆ-ತೊಡುಗೆ ಮುಂತಾದ ಅಂಶಗಳನ್ನು ಅಳವಡಿಸಿಕೊಂಡಿದ್ದಾನೆ. ಈ ಅಂಶಗಳು ಮಾನವನು ಪ್ರಾಚೀನ ಸ್ಥಳನಾಮಗಳು ಪ್ರಾಚೀನ ಸಮಾಜ ಮತ್ತು ಸಂಸ್ಕೃತಿಯನ್ನು ಅರಿಯಲು ಮುಖ್ಯ ಸಾಧನವಾಗಿದೆ ಎಂದು ಶಂಬಾಜೋಶಿಯವರು "ಎಡೆಗಳು ಹೇಳುವ ಕಂನಾಡ ಕತೆ"ಯೆಲ್ಲಿ ತಿಳಿಸಿದ್ದಾರೆ.

ಸ್ಥಳನಾಮಗಳು ಸಂಸ್ಕೃತಿ ವಾಹಕತೆಯ ಸಾಧನೆಗಳೆಂದು ಗುರುತಿಸಿಕೊಂಡು, ಕರ್ನಾಟಕದ ಸಂಸ್ಕೃತಿಯ ಅಧ್ಯಯನ ಮಾಡಿದ್ದಾರೆ.

ಮಾನವನ "ಸಮೂಹ ಜೀವಿ" ಆ ಸಾಂಘಿಕ ಜೀವನದಲ್ಲಿ ಪರಸ್ಪರ ಅವಲಂಬನೆ ಇರುತ್ತದೆ. ಈ ರೀತಿಯ ಅವಲಂಬನೆಯಿಂದ ಚಾತುರ್ವರ್ಣಗಳು ಹುಟ್ಟಿಕೊಂಡವು. ಅಷ್ಟೇ

ಅಲ್ಲದೆ ವರ್ಣಗಳಿಂದ ಕೆಳಸ್ತರದ ಸಣ್ಣ ಸಣ್ಣ ಗುಂಪುಗಳಾಗಿ ವಿಭಜನೆಯಾದವು, ಅವುಗಳಿಂದ ಅನೇಕ ಜಾತಿಗಳು, ಉಪಜಾತಿಗಳು ಸೃಷ್ಟಿಯಾದವು. ಕೆಲವು ಜಾತಿಗಳು ವೃತ್ತಿಯನ್ನು ಅನುಸರಿಸಿ ಅದುವೇ ಕುಲಕಸುಬುಗಳಾದವು. ಆ ವೃತ್ತಿಗಳು ಮತ್ತು ಜಾತಿಗಳು ಪರಸ್ಪರ ಒಂದನ್ನೊಂದು ಬಿಂಬಿಸುವಂತೆ ಸಮಾಜದಲ್ಲಿ ಅಳವಡಿಕೆಯಾಯಿತು. ಜಾತಿ ಮತ್ತು ವೃತ್ತಿಗಳು ಒಂದು ಗ್ರಾಮವನ್ನು ಗುರುತಿಸಲು ನಿರ್ದಿಷ್ಟಗಳಾಗಿ ಬಂದವು. ಈ ರೀತಿಯ ಸ್ಥಳನಾಮಗಳನ್ನು ಎಲ್ಲಾ ಪ್ರದೇಶಗಳಲ್ಲೂ ಕಾಣಬಹುದು.

ಮಾನವನಿಗೆ ದೈವಿಕತೆ ಉಂಟಾಗಿರುವುದು ನೈಸರ್ಗಿಕ ಪ್ರಕೋಪಗಳಾದ ಭೂಕಂಪ, ನೆರೆ, ಕ್ಷಾಮ ಮುಂತಾದವುಗಳಿಂದಲೇ. ಸೃಷ್ಟಿನಾಶ ವಿಶೇಷವಾದ ಹಾಗೂ ಅಗೋಚರ ಶಕ್ತಿ ಇದೆ ಎಂಬ ನಂಬಿಕೆ ಅವನದು, ಹೀಗಾಗಿ ಪ್ರಪಂಚದಲ್ಲಿ ನಡೆಯುವ ಪ್ರತಿಯೊಂದು ಕ್ರಿಯೆಗೂ ದೈವವೇ ಕಾರಣವೆಂಬ ನಂಬಿಕೆ. ಅನೇಕ ಹೆಸರುಗಳ ಮೂಲಕ ದೈವವನ್ನು ಕಾಣಲು ಪ್ರಯತ್ನಿಸಿದ್ದಾನೆ. ಸ್ಥಳನಾಮಗಳಲ್ಲಿ ದೈವಿಕ ಅಂಶ ಸೂಚಿಸುವ ನಿರ್ದಿಷ್ಟಗಳನ್ನು ಗುರುತಿಸಬಹುದು.

ಪ್ರಸ್ತುತ ಅಧ್ಯಯನಕ್ಕಾಗಿ ಬೀಳಗಿ ತಾಲ್ಲೂಕಿನ ಸ್ಥಳನಾಮಗಳನ್ನು ಅವುಗಳಲ್ಲಿರುವ ಅಂಶಗಳನ್ನು ಆಧರಿಸಿ ೪ ವಿಧಗಳಲ್ಲಿ ಅಧ್ಯಯನ ಮಾಡಲಾಗಿದೆ. ಅವುಗಳೆಂದರೆ

೧. ಪ್ರಾಕೃತಿಕ ಸ್ಥಳನಾಮಗಳು

೨. ಸಾಂಸ್ಕೃತಿಕ ಸ್ಥಳನಾಮಗಳು

೩. ಸಾಮಾಜಿಕ ಸ್ಥಳನಾಮಗಳು

೪. ಸಂಕೀರ್ಣ ಸ್ಥಳನಾಮಗಳು

## ೧. ಪ್ರಾಕೃತಿಕ ಸ್ಥಳನಾಮಗಳು

ಮಾನವನು ಪ್ರಕೃತಿಯಾ ಒಂದು ಭಾಗವಾಗಿ ಬೆಳೆದು ಬಂದಿದ್ದಾನೆ ಅವನ ಬದುಕಿನ ಮೇಲೆ ಭೌಗೋಳಿಕ ಪರಿಸರದ ಪ್ರಭಾವ ಅಪಾರಿಮಿತವಗಿದೆ. ಸ್ಥಳನಾಮಗಳಲ್ಲಿ ನಿರ್ದಿಷ್ಟ ಆಕೃತಿ ವಣವಾಗಿ ಪ್ರಕೃತಿಕ ಅಂಶಗಳನ್ನು ಬಳಸಿಕೊಂಡಿರುವುದು ಪ್ರಾಚೀನ ವಿಧಾನವಾಗಿದೆ ಗುಡ್ಡ ಭೂಪ್ರದೇಶ ಕಾಡು ಪ್ರಾಣಿ, ಪಕ್ಷಿ, ನದಿ, ಹಳ್ಳಕೊಳ್ಳ ಮುಂತಾದ ಅಂಶಗಳು ನಿರ್ದಿಷ್ಟವಾಗಿ ಅಥವಾ ವಾರ್ಗಿಕವಾಗಿ ಕಾರ್ಯನಿರ್ವಹಿಸಿದೆ ಕಾರಣ ಮಾನವನಂತೆ ಪ್ರಕೃತಿಯ ಅಲ್ಪಾಯುಷಿ ಯಲ್ಲಿ ಭೌಗೋಳಿಕ ಲಕ್ಷಣಗಳಿಂದ ಒಂದು ನಿರ್ದಿಷ್ಟ ಸ್ಥಳವನ್ನು ಗುರುತಿಸುವಲ್ಲಿ ಸ್ಪಷ್ಟತೆ ಇರುತ್ತದೆ ಮಾನವನು ಬುದಿವಂತಿಕೆಯಿಂದ ಈ ನಿರ್ದಿಷ್ಟಗಳನ್ನು ಬಳಿಸಿಕೊಂಡಿದ್ದಾನೆ. ಬೀಳಗಿ ತಾಲೂಕು ಎರಡು ನದಿಗಳಾದ ಕೃಷ್ಣ ಘಟಪ್ರಭೆಯ ಮಧ್ಯಭಾಗದಲ್ಲಿರುವುದರಿಂದ ಫಲವತ್ತಾದ ಕಪ್ಪುನೆಲ, ಕೆಂಪು ಮಣ್ಣು ಮತ್ತು ಕಬ್ಬಿಣದ ಅದಿರು, ಗುಡ್ಡ,ಬೆಟ್ಟ,ಹಳ್ಳ-ಕೊಳ್ಳಗಳನ್ನು ಹೊಂದಿದೆ. ಬೀಳಗಿ ತಾಲ್ಲೂಕಿನ ಸ್ಥಳನಾಮಗಳಲಲ್ಲಿ ಪ್ರಕೃತಿಗೆ ಸಂಬಂಧಿಸಿದ ಅನೇಕ ಅಂಶಗಳು ಒಳಗೊಂಡಿವೆ. ಅವುಗಳಲ್ಲಿ ಗುಂಡಿ, ಸಾಗರ, ಕಲ್ಲು, ದಿಣ್ಣೆ, ತಗ್ಗು, ಹಳ್ಳ ಇತ್ಯಾದಿಗಳಿವೆ. ಅವುಗಳನ್ನು ಸೂಚಿಸುವ ಸ್ಥಳನಾಮಗಳನ್ನು ಈ ಕೆಳಗೆ ವಿವರಿಸಲಾಗಿದೆ.

## ೧.೧ ಪ್ರಾಕೃತಿಕವಾಚಿ ಸ್ಥಳನಾಮಗಳು

೧. ಅರಕೇರಿ
೨. ಆಲಗುಂಡಿ
೩. ಕಂದಗಲ್ಲ
೪. ಗಿರಿಸಾಗರ
೫. ಗಿರಿಗಾವ
೬. ಗುಡದಿನ್ನಿ
೭. ನಾಗರಾಳ
೮. ಗುಳಬಾಳ
೯. ತೆಗ್ಗಿ
೧೦. ಬೀಳಗಿ
೧೧. ಬೂದಿಹಾಳ
೧೨. ಮನ್ನಿಕೇರಿ
೧೩. ಹೆರಕಲ್ಲ

**ಅರಕೇರಿ:** ಅರ ಎಂದರೆ ಕಲ್ಲು ಅಥವಾ ಬಂಡೆ. ಈ ಗ್ರಾಮದ ಎಡಕ್ಕೆ ಕಲ್ಲು ಗುಡ್ಡವಿದ್ದು ಅಲ್ಲಿ ನೀರು ನಿಲ್ಲುತ್ತಿತ್ತು. ಅಲ್ಲಿಯೇ ಊರು ನಿರ್ಮಾಣವಾಗಿರುವುದರಿಂದ ಅರಕೇರಿ ಎಂದು ಕರೆಯಲಾಗಿದೆ.

**ಅರ+ಕೇರಿ=ಅರಕೇರಿ (ಕೆರಿ>ಕೇರಿ)**

**ಆಲಗುಂಡಿ:** ಆಲ ಎಂಬುದು ಸಸ್ಯವು ಹೆಚ್ಚಾಗಿ ಬೆಳೆದಿರುವ ಗುಂಡಿ ಎಂದರೆ ತಗ್ಗು ಪ್ರದೇಶ, ಹೀಗಾಗಿ ಆಲದ ಮರಗಳು ತಗ್ಗು ಪ್ರದೇಶದಲ್ಲಿ ಬೆಳೆದಿರುವುದರಿಂದ ಆಲಗುಂಡಿ ಎಂದು ಕರೆಯಲಾಗಿದೆ.

**ಆಲ+ಗುಂಡಿ=ಆಲಗುಂಡಿ**

'ಆಲ' ಎಂಬುದು ಜಲವಾಚಿಯೂ ಹೌದು ಆದ್ದರಿಂದ ಇದು ನೀರಿನ ಗುಂಡಿಯೂ ಇರಬಹುದು.

**ಕಂದಗಲ್ಲ:** ಇದು ವಾರ್ಗಿಕ ಪ್ರಧಾನವಾಗಿರುವ ಸ್ಥಳನಾಮ ಕಂದುಬಣ್ಣದ ಕಲ್ಲುಗಳು ಇರುವ ಸ್ಥಳ ಮತ್ತು ಗ್ರಾಮ ನಿರ್ಮಾಣದಲ್ಲಿ ಬಳಸಿದ್ದಾರೆ ಹಾಗಾಗಿ ಕಂದಗಲ್ಲ ಎಂದು ಕರೆಯಲಾಗಿದೆ.

**ಕಂದ+ಕಲ್ಲು (ಕ>ಗ)**

**ಗಿರಿಸಾಗರ:** 'ಗಿರಿ' ಎಂದರೆ ಬೆಟ್ಟ ಗ್ರಾಮಕ್ಕೆ ಅಂಟಿಕೊಂಡಿರುವ ಗುಡ್ಡದಲ್ಲಿ ಒಂದು ದೊಡ್ಡ ಕೆರೆಯಿದೆ, ಜನರು ಅದಕ್ಕೆ ಸಾಗರ ಎಂದು ಉತ್ಪ್ರೇಕ್ಷೆಯಿಂದ ಗಿರಿಸಾಗರ ಎಂದು ಕರೆಯಲಾಗಿದೆ.

**ಗಿರಿ+ಸಾಗರ=ಗಿರಿಸಾಗರ; ಜನಬಳಕೆ ಗಿರಸಾಗರ.**

**ಗಿರಿಗಾವಿ:** ಗಿರಿ ಎಂಬ ವಿಶಿಷ್ಟವು ಗುಡ್ಡ, ಬೆಟ್ಟ ಭೌಗೋಳಿಕ ಲಕ್ಷಣವನ್ನು ಸೂಚಿಸುವುದು. ಗಾವ್ ಎಂಬ ವಾರ್ಗಿಕವು ಮರಾಠಿ ಪದವಾಗಿದ್ದು ಅಂದರೆ ಹಳ್ಳಿ, ಊರು ಎಂದು ಸೂಚಿಸುವುದು ಈ ಭಾಗವು ಮುಂಬೈ-ಕರ್ನಾಟಕಕ್ಕೆ ಸೇರಿರುವುದರಿಂದ ಮರಾಠಿ ಪದಬಳಕೆ ಕಂಡುಬರುವುದು.

ಗಾಂವ್>ಗಾವ್>ಗಾವಿ ಎಂಬುದಾಗಿ ಬಂದಿದೆ. ಉಚ್ಚಾರಣೆಯಲ್ಲಿ ಗಿರಿಗಾಂವ್ ಎಂದು ಕರೆಯುತ್ತಾರೆ.

**ನಾಗರಾಳ:** ಹಾಳ್ ಎಂಬ ವಾರ್ಗಿಕ ಹಳ್ಳ ಎಂದು ಸೂಚಿಸುತ್ತದೆ. ಈ ಗ್ರಾಮದ ಮುಂದೆ ನಾಗರಹಾವಿನ ರೀತಿ ಹಳ್ಳ ಪ್ರವಹಿಸಿರುವುದರಿಂದ ನಾಗರಾಳ ಎಂದಾಗಿದೆ.

**ನಾಗರ+ಹಾಳ್=ನಾಗರಹಾಳ>ನಾಗರಾಳ**

**ಗುಡದಿನ್ನಿ:** ಗುಡ್ಡ ಎಂಬ ನಿರ್ದಿಷ್ಟ ಪದವು ಸವಕಳಿಯಾಗಿ ಗುಡ ಎಂದು ಬಳಕೆಯಾಗಿದೆ. ದಿನ್ನಿ ಎಂಬ ವಾರ್ಗಿಕವು ಎತ್ತರ ಭೂಪ್ರದೇಶ, ದಿಬ್ಬ, ಏರಿ ಎನ್ನು ಸೂಚಿಸುತ್ತದೆ.

ಗುಡ್ಡದ+ದಿನ್ನಿ = ಗುಡ್ಡದದಿನ್ನಿ>ಗುಡದಿನ್ನಿ, ಇಲ್ಲಿ ವಾರ್ಗಿಕವು ವಿಶಿಷ್ಟವಾದುದ್ದನ್ನು ಗಮನಿಸಬಹುದು. ಅಲ್ಲದೆ ಗುಡ್ಡ+ದಿನ್ನಿ ದ್ವಿರುಕ್ತಿ ಪದ ಆಗಿದೆ.

**ಗುಳಬಾಳ:** ಗುಳಬ ಎಂದರೆ ಗುಡುಂಬ ಎಂದರ್ಥ, ಗುಡುಂಬವು ಮಾವು ಮತ್ತು ನೆಲ್ಲಿಯಿಂದ ಮಿಶ್ರಿತವಾದ ಮರಬ್ಬವಾಗಿದೆ. ಉತ್ತರ ಕರ್ನಾಟಕದಲ್ಲಿ ಗುಳಮ್ ಎಂದು ಕರೆಯುತ್ತಾರೆ. ಹಳ್ಳದಲ್ಲಿ ಮಾವು ಮತ್ತು ನೆಲ್ಲಿಯ ಮರಗಳು ಇರುವುದರಿಂದ ಗುಳಬಹಾಳ ಎಂದು ಬಂದಿದೆ.

**ಗುಳಬ+ಹಾಳ=ಗುಳಬಹಾಳ>ಗುಳಬಾಳ**

**ಗುಂಡನಪಲ್ಲೆ:** ಪಲ್ಲೆ ಎಂಬುದು ತೆಲುಗು ವಾರ್ಗಿಕ ಪದ. ಅಂದರೆ ಹಳ್ಳಿ ಎಂದರ್ಥ. ಈ ಪ್ರದೇಶವು ಕೃಷ್ಣೆಯ ದ್ವೀಪ ಪ್ರದೇಶವಾದ್ದರಿಂದ

ಮೀನುಗಾರಿಕೆಗೆ ತೆಲುಗರು ಬಂದಿರಬಹುದು ಅಲ್ಲದೆ ಈ ದ್ವೀಪ ದುಂಡಾಗಿ ಇರುವುದರಿಂದ ಈ ಊರಿಗೆ ಗುಂಡನಪಲ್ಲೆ ಎಂದು ಹೆಸರಾಗಿದೆ..

**ಗೋಡಿಹಾಳ:** ಹಾಳ ಎಂದರೆ ಹಳ್ಳ ಈ ಪ್ರದೇಶವು ಗೋಡು ಎಂಬುದು ಮಣ್ಣಿನ ವಿಧ ಇದು ಫಲವತ್ತಾಗಿರುತ್ತದೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ತುಂಬಿಕೊಳ್ಳುತ್ತಿದೆ. ಇದನ್ನು ಹೊಲಗಳಿಗೆ ಹಾಕಲಾಗುತ್ತದೆ. ಇಂತಹ ಮಣ್ಣುಳ್ಳ ಹಳ್ಳ ಗೋಡು ಹಾಳ ಆಗಿದೆ.

**ಗೋಡು+ಹಾಳು=ಗೋಡಿಹಾಳ**

**ತೆಗ್ಗಿ:** ಇದೊಂದು ನಿಸರ್ಗವಾಚಿ. ತಗ್ಗಾದ ಪ್ರದೇಶದಲ್ಲಿ ಊರು ನಿರ್ಮಾಣವಾದ್ದರಿಂದ ತೆಗ್ಗಿ ಎಂದು ಬಂದಿದೆ.

**ತಗ್ಗು+ಕೆಯ್=ತೆಗ್ಗಿ**

**ಬೂದಿಹಾಳ(ಎಸ್.ಎಚ್.):** ಈ ಪ್ರದೇಶವು ಪ್ರಾಗೈತಿಕ ಕಾಲದಲ್ಲಿ ಆಯುಧಗಳ ನಿರ್ಮಿಸುವ ಸ್ಥಳವಾದರಿಂದ ಆಯುಧ ನಿರ್ಮಿಸುವಾಗ ಬಂದ ಬೂದಿಯನ್ನು ಹಳ್ಳದಲ್ಲಿ ಹಾಕುತ್ತಿದುದರಿಂದ ಬೂದಿಹಾಳ ಎಂದಾಗಿದೆ.

ಎರಡು ಒಂದೇ ಹೆಸರಿನ ಗ್ರಾಮವಿರುವುದರಿಂದ ಆಡಳಿತ ದೃಷ್ಟಿಯಿಂದ ಒಂದನ್ನು ಸಮ್ಮತ್ ಹವೇಲಿ ಮತ್ತೊಂದು ಸಮ್ಮತ್ ಗಲಗಲಿ ಎಂದು ಗುರ್ತಿಸಿ ಕರೆಯುತ್ತಾರೆ.

**ಬೀಳಗಿ:** ನಿಸರ್ಗವಾಚಿ. ಬೀಳಲ್ ಎಂದರೆ ಆಲದ ಮರಗಳಿಂದ ಕೊಂಬೆಗಳು ನೆಲಕ್ಕೆ ಅಂಟಿರುವುದು. ಈ ಪ್ರದೇಶದಲ್ಲಿ ಆಲದ ಮರಗಳು ಹೆಚ್ಚಾಗಿರುವುದರಿಂದ ಇಲ್ಲಿಯೇ ಗ್ರಾಮ ನಿರ್ಮಾಣವಾದ್ದರಿಂದ ಬೀಳಗಿ ಎಂದು ಕರೆದಿರಬಹುದು. ಶಾಸನಗಳಲ್ಲಿ ಬಿಳಗಿ ಎಂದು ಗುರುತಿಸಿದ್ದಾರೆ.

**ಬಿಳಲು>ಬೀಳಲು+ಗಿ>ಬೀಳಗಿ**

**ಮನ್ನಿಕೇರಿ:** ಕೇರಿ>ಕೆರಿ. ಕೆರೆಯನ್ನು ಸೂಚಿಸುತ್ತದೆ. ಇಲ್ಲಿನ ಕೆರೆಯು ಮಣ್ಣಿನಿಂದ ನಿರ್ಮಿಸಿರುವುದರಿಂದ ಮಣ್ಣಿನ+ಕೆರೆ> ಮಣ್ಣಿಕೆರೆ>ಮನ್ನಿಕೆರಿ ಎಂದಾಗಿದೆ.

**ಹೆರಕಲ್ಲ:** ನಿಸರ್ಗವಾಚಿ. ನೂತನ ಶಿಲಾಯುಗದಲ್ಲಿ ಈ ಗ್ರಾಮದಲ್ಲಿ ಶಸ್ತ್ರಾಸ್ತ್ರ ಘಟಕ ಇತ್ತು ಎಂಬುದಕ್ಕೆ ಪಳಿಯುಳಿಕೆಗಳು ದೊರೆಯುತಿವೆ. ಅಂದರೆ ಆಯುಧ ತಯಾರಿಕೆಗೆ ಕಲ್ಲು ಇರುವುದರಿಂದ ಎರಕದ+ಕಲ್ಲು>ಹೆರಕಲ್ಲು ಎಂದಾಗಿರಲೂಬಹುದು.

**೨. ಸಾಂಸ್ಕೃತಿಕ ಸ್ಥಳನಾಮಗಳು**

ಸ್ಥಳನಾಮಗಳು ಸಂಸ್ಕೃತಿಯ ಅಧ್ಯಯನಗಳಲ್ಲಿ ಪ್ರಮುಖ ಆಕರಗಳಾಗಿವೆ. ಒಂದು ಹೆಸರಿನಲ್ಲಿ ಒಂದು ಜೀವನಕ್ರಮ ಇರುತ್ತದೆ, ನೇರವಾಗಿ ಜೀವನಕ್ರಮದ ಸಂಗತಿಯನ್ನು ಹೇಳುತ್ತಿಲ್ಲವಾದರೂ ಪರೋಕ್ಷನೆಲೆಯಲ್ಲಿ ತೆರೆದು ತೋರಿಸುವ ಮೂಲಾಧಾರವಾಗಿ ಸ್ಥಳನಾಮಗಳು ಮಹತ್ವವೆನಿಸಿವೆ, ಸಾಮಾಜಿಕ ಚಹರೆ ಮತ್ತು ಸಾಂಸ್ಕೃತಿಕ ಚಹರೆಗಳ ಅಧ್ಯಯನ ಮಾಡುವಲ್ಲಿ, ಸ್ಥಳನಾಮಗಳು ಪ್ರಮಾಣಿಕ ಸಾಂಸ್ಕೃತಿಕ ಪ್ರಜ್ಞೆಯುಳ್ಳ ವ್ಯಕ್ತಿಗಳು ಮತ್ತು ಸಮಾಜ ಸ್ಥಳನಾಮಗಳನ್ನು ಪ್ರಮುಖ ಆಕರಗಳೆಂದು ಭಾವಿಸಿದಲ್ಲಿ, ವಾಸ್ತವತೆಯ ತಳಹದಿಯ ಸಂಸ್ಕೃತಿಯ ಅಧ್ಯಯನಕ್ಕೆ ತೊಡಗಲು ಸಾಧ್ಯವಾಗುತ್ತದೆ

**೨.೧ ಸಾಂಸ್ಕೃತಿಕ ಸ್ಥಳನಾಮಗಳು**

೧. ಅನಗವಾಡಿ
೨. ಅಮಲಝರಿ
೩. ಗಲಗಲಿ
೪. ಧವಳೇಶ್ವರ
೫. ಚಿಕ್ಕಸಂಗಮ
೬. ಶಿವಾಪುರ
೭. ಲಿಂಗಾಪುರ
೮. ಚೌಡಾಪುರ

**ಅನಗವಾಡಿ:** ಅನಗವಾಡಿ ಗಾಮವು ಐತಿಹಾಸಿಕವಾಗಿ ಶಿಲಾಯುಗದ ಪಳಿಯಳಕೆಗಳು ಮತ್ತು ಈ ಊರಿನಲ್ಲಿ ಶಾಸನ ದೊರೆತಿದೆ. ಶಾಸನದಲ್ಲಿ ಅನಂಗವೆಂದು ಉಲ್ಲೇಖಿತವಾಗಿದೆ

ಅನಂಗ ಎಂದರೆ ಶಿವ. ಈ ಗ್ರಾಮದಲ್ಲಿ ಶಿವನ ದೇವಸ್ಥಾನವಿರುವುದರಿಂದ ಅನಗವಾಡಿ ಎಂದು ಹೆಸರು ಬಂದಿದೆ

**ಅನಂಗ > ಅನಗ+ವಾಡಿ=ಅನಗವಾಡಿ**

**ಅಮಲಝುರಿ:** ಅಂಬರೀಶ ಎಂಬ ಋಷಿಯು ಝುರಿಯ ಹತ್ತಿರ ವಾಸವಾಗಿದ್ದನು ಆದ್ದರಿಂದ ಈ ಊರಿಗೆ ಹೆಸರು ಬಂದಿದೆ.

ಅಂಬಲ+ಝುರಿ> ಅಂಬಲಜೇರಿ ಬರೆಹ ರೂಪದಲ್ಲಿ ಅಮಲಝುರಿ ಎಂದು ಬಳಕೆಯಲ್ಲಿದ್ದರೂ ಮಾತಿನಲ್ಲಿ ಅಂಬಲಜೇರಿ.

**ಗಲಗಲಿ:** ಈ ಗ್ರಾಮದಲ್ಲಿ ಗಾಲವ ಮುನಿಗಳು ವಾಸವಾಗಿದ್ದರೆಂದೂ ಆಮುನಿಯ ಹೆಸರೇ ಗ್ರಾಮಕ್ಕೆ ಬಂದಿದೆ ಎಂದು ಜನರ ಅಭಿಪ್ರಾಯ

**ಢವಳೇಶ್ವರ:** ಧವಲ ಎಂದರೆ ಶ್ವೇತವರ್ಣ: ಬಿಳಿಯಬಣ್ಣ ಈಶ್ವರ (ಲಿಂಗು) ಇರುವ ಸ್ಥಳವೇ ಢವಳೇಶ್ವರವಾಗಿದೆ. ಇಲ್ಲಿ "ಧ" ಕಾರ "ಢ"ಕಾರ ಆಗಿರುವುದು ಬಹುಶಃ ಇಂಗ್ಲಿಶಿನ ಕಾರಣ ಇರಬಹುದು.

**ಧವಲ> ಢವಳ+ಈಶ್ವರ =ಢವಳೇಶ್ವರ**

**ಚಿಕ್ಕಸಂಗಮ:** ಅಣ್ಣ ಬಸವಣ್ಣನಿಗೆ ಜಾತವೇದ ಮುನಿಗಳು ದೀಕ್ಷೆ ನೀಡಿರುವ ಸ್ಥಳವೆಂದು ಹೇಳುವರು ಮುಖ್ಯವಾಗಿ, ಪೆರ್ದೊರೆ, ಕೃಷ್ಣೆ ಮತ್ತು ಘಟಪ್ರಭೆ ಎರಡು ಉತ್ತರ ಕರ್ನಾಟಕದ ಜೀವನದಿಗಳು ಇವೆರಡು ಕೂಡುವುದರಿಂದ ಸಂಗಮ ಎಂದು ಕರೆಯಲಾಗಿದೆ. ಇದೆ ಜಿಲ್ಲೆಯಲ್ಲಿ ಕೂಡಲಸಂಗಮ ಎಂಬ ಗ್ರಾಮವು ಕೃಷ್ಣ–ಘಟಪ್ರಭೆ–ಮಲಪ್ರಭೆಯ ಸಂಗಮವಾದರೆ– ಇವು ಎರಡು ನದಿಗಳಿಂದ ಸಂಗಮವಾದ್ದರಿಂದ ಚಿಕ್ಕ ಸಂಗಮ ಎಂದು ಕರೆದಿರ ಬಹುದಾಗಿದೆ.

**ಶಿವಾಪುರ:** ಶಿವ ದೇವಾಲಯ ಇರುವುದರಿಂದ ಆಗ್ರಾಮಕ್ಕೆ ಶಿವಾಪುರ ಎಂದು ಕರೆದಿರಬಹುದು ಶಿವ ವಿಶಿಷ್ಟ, ಪುರ ವಾರ್ಗಿಕ.

**ಶಿವ+ಪುರ=ಶಿವಾಪುರ**

**ಲಿಂಗಾಪುರ (ಸಮ್ಮತ್ ಕಾತರಕಿ):** ಈಶ್ವರನ ಕುರುಹು ಲಿಂಗ: ವೀರಶೈವರು ಹೆಚ್ಚಾಗಿ "ಲಿಂಗವಂತ"ರು ಇರುವುದರಿಂದಲೂ, "ಲಿಂಗ" ವಿರುವ ದೇವಾಲಯ ಇರುವುದರಿಂದ ಲಿಂಗಾಪುರ ಎಂದು ಕರೆದಿರಬಹುದು "ಸಮ್ಮತ್" ಅಧಿಕಾರ ಒಪ್ಪಕೊಳ್ಳ ಆ ಊರಿನ ಆಡಳಿತವನ್ನಾ ಕಾತರಕಿಯವರು ನೋಡುತ್ತಿದ್ದುದರಿಂದ ಲಿಂಗಾಪುರ (ಎಸ್.ಕೆ) ಈ ಊರಿನ ಆಡಳಿತವು

ರೊಳ್ಳಿಯವತಿಯಿಂದ ನಡೆಸಲಾಗುತಿತ್ತು ಹಾಗಾಗಿ ಲಿಂಗಾಪುರ ಎಸ್.ಆರ್ ಎಂದು ಗುರುತಿಸಲು ಕರೆದಿದ್ದಾರೆ.

ಲಿಂಗ+ಪುರ=ಲಿಂಗಾಪುರ, ಪೂರ್ವಪದದ ಕೊನೆಯ "ಅ" ಹೃಸ್ವಸ್ವರ "ಆ"ದೀರ್ಘಸ್ವರವಾಗಿದೆ. ಈ ಊರಿಗೆ ನಿಂಗಾಪುರ ಎಂದು ಕೂಡಾ ಕರೆಯುತ್ತಾರೆ.

**ಚೌಡಾಪುರ:** ಈ ಗ್ರಾಮದಲ್ಲಿ ಚಾಮುಂಡಿ ವಾಸವಾಗಿದ್ದರಿಂದ ಈ ಊರಿಗೆ ಚಾಮುಂಡಿಪುರ ಎಂದು ಕರೆಯಲಾಗಿದೆ. ಅದು ಚಾಮುಂಡಿ>ಚೌಡಾ+ಪುರ=ಚೌಡಾಪುರ

**೩. "ಸ್ಥಳನಾಮಗಳ ಸಾಮಾಜಿಕ ಅಧ್ಯಯನ"**

ಸಾಮಾಜಿಕ ಅಂಶಗಳನ್ನು ತಿಳಿಸುವ ಸ್ಥಳನಾಮಗಳಿಗೆ ಸಾಮಾಜಿಕ ಸ್ಥಳನಾಮಗಳೆಂದು ಕರೆಯುತ್ತೇವೆ. ವ್ಯಕ್ತಿ, ಜಾತಿ, ವೃತ್ತಿ, ವರ್ಗ, ದೈವಿಕ ವಿಷಯಗಳು ಸಾಮಾಜಿಕ ಅಂಶಗಳಲ್ಲಿ ಮುಖ್ಯವಾದವುಗಳು

ಮಾನವನು ತನ್ನ ಸಾಂಸ್ಕೃತಿಕ ಬದುಕಿನಲ್ಲಿ ಆತನ ಆಚಾರ-ವಿಚಾರ-ಭಾಷೆ, ಧರ್ಮ ಉಡುಗೆ-ತೊಡುಗೆ ಮುಂತಾದ ಅಂಶಗಳನ್ನು ಅಳವಡಿಸಿಕೊಂಡಿದ್ದಾನೆ. ಈ ಅಂಶಗಳು ಮಾನವನು ಪ್ರಾಚೀನ ಸ್ಥಳನಾಮಗಳು ಪ್ರಾಚೀನ ಸಮಾಜ ಮತ್ತು ಸಂಸ್ಕೃತಿಯನ್ನು ಅರಿಯಲು ಮುಖ್ಯ ಸಾಧನವಾಗಿದೆ ಎಂದು ಶಂಭಾಜೋಶಿಯವರು "ಎಡೆಗಳು ಹೇಳುವ ಕರಿನಾಡ ಕತೆ"ಯಲ್ಲಿ ತಿಳಿಸಿದ್ದಾರೆ.

ಸ್ಥಳನಾಮಗಳ ಸಂಸ್ಕೃತಿ ವಾಹಕತೆಯ ಸಾಧನೆಗಳೆಂದು ಗುರುತಿಸಿಕೊಂಡು, ಕರ್ನಾಟಕದ ಸಂಸ್ಕೃತಿಯ ಅಧ್ಯಯನ ಮಾಡಿದ್ದಾರೆ.

ಮಾನವನ "ಸಮೂಹ ಜೀವಿ" ಆ ಸಾಂಘಿಕ ಜೀವನದಲ್ಲಿ ಪರಸ್ಪರ ಅವಲಂಬನೆ ಇರುತ್ತದೆ. ಈ ರೀತಿಯ ಅವಲಂಬನೆಯಿಂದ ಚಾತುರ್ವರ್ಣಗಳು ಹುಟ್ಟಿಕೊಂಡವು. ಅಷ್ಟೇ ಅಲ್ಲದೆ ವರ್ಣಗಳಿಂದ ಕೆಳಸ್ಥರದ ಸಣ್ಣ ಸಣ್ಣ ಗುಂಪುಗಳಾಗಿ ವಿಭಜನೆಯಾದವು, ಅವುಗಳಿಂದ ಅನೇಕ ಜಾತಿಗಳು, ಉಪಜಾತಿಗಳು ಸೃಷ್ಠಿಯಾದವು. ಕೆಲವು ಜಾತಿಗಳು ವೃತ್ತಿಯನ್ನು ಅನುಸರಿಸಿ ಅದುವೇ ಕುಲಕಸುಬುಗಳಾದವು. ಆ ವೃತ್ತಿಗಳು ಮತ್ತು ಜಾತಿಗಳು ಪರಸ್ಪರ ಒಂದನ್ನೊಂದು ಬಿಂಬಿಸುವಂತೆ ಸಮಾಜದಲ್ಲಿ ಅಳವಡಿಕೆಯಾಯಿತು. ಜಾತಿ ಮತ್ತು ವೃತ್ತಿಗಳು ಒಂದು ಗ್ರಾಮವನ್ನು ಗುರುತಿಸಲು ನಿರ್ದಿಷ್ಟಗಳಾಗಿ ಬಂದವು. ಈ ರೀತಿಯ ಸ್ಥಳನಾಮಗಳನ್ನು ಎಲ್ಲಾ ಪ್ರದೇಶಗಳಲ್ಲೂ ಕಾಣಬಹುದು.

ಮಾನವನಿಗೆ ದೈವಿಕತೆ ಉಂಟಾಗಿರುವುದು ನೈಸರ್ಗಿಕ ಪ್ರಕೋಪಗಳಾದ ಭೂಕಂಪ, ನೆರೆ, ಕ್ಷಾಮ ಮುಂತಾದವುಗಳಿಂದಲೇ ಸೃಷ್ಟಿನಾಶ ವಿಶೇಷವಾದ ಹಾಗೂ ಅಗೋಚರ ಶಕ್ತಿ ಇದೆ ಎಂಬ ನಂಬಿಕೆ ಅವನದು, ಹೀಗಾಗಿ ಪ್ರಪಂಚದಲ್ಲಿ ನಡೆಯುವ ಪ್ರತಿಯೊಂದು ಕ್ರಿಯೆಗೂ ದೈವವೇ

ಕಾರಣವೆಂಬ ನಂಬಿಕೆ. ಅನೇಕ ಹೆಸರುಗಳು ಮೂಲಕ ದೈವವನ್ನು ಕಾಣಲು ಪ್ರಯತ್ನಿಸಿದ್ದಾನೆ. ಸ್ಥಳನಾಮಗಳಲ್ಲಿ ದೈವಿಕ ಅಂಶ ಸೂಚಿಸುವ ನಿರ್ದಿಷ್ಟಗಳನ್ನು ಗುರುತಿಸಬಹುದು.

ವಸ್ತುಗಳಿಗೆ ಹೆಸರು ಇಟ್ಟದ್ದು, ಮನುಷ್ಯನ ಬೌದ್ಧಿಕ ವಿಕಾಸದ ನಿದರ್ಶನ. ವ್ಯಕ್ತಿಯನ್ನು ಮತ್ತೊಬ್ಬ ವ್ಯಕ್ತಿಯಿಂದ ಬೇರ್ಪಡಿಸಿಕೊಳ್ಳಲು ಹಾಗೂ ವ್ಯಕ್ತಿಯ ಅನುಪಸ್ಥಿತಿಯಲ್ಲಿ ಅವನನ್ನು ಸ್ಮರಿಸಲು ವ್ಯಕ್ತಿನಾಮ ನೀಡುವ ರೂಢಿಯು ಸಾಮಾಜಿಕವಾಗಿ ಮಹತ್ವ ಅಂಶವಾಗಿದೆ. ದೇವರ ನಿರ್ದಿಷ್ಟಗಳು ವ್ಯಕ್ತಿಗಳ ನಾಮವಾದವು, ಆ ನಾಮಗಳೇ ಸ್ಥಳನಾಮಗಳಾಗಿದ್ದನ್ನು ಕಾಣುತ್ತೇವೆ. ಪ್ರಸ್ತುತ ವಿಷಯದ ಕ್ಷೇತ್ರದಲ್ಲಿ ಪ್ರಾಚೀನ ಸ್ಥಳನಾಮಗಳಿರುವುದರಿಂದ ಅಧ್ಯಯನ ಮಾಡುವ ಮೂಲಕ ಸಾಮಾಜಿಕ, ಸಾಂಸ್ಕೃತಿಕ ಅಂಶಗಳನ್ನು ಹುಡುಕಲಾಗಿದೆ.

ಸ್ಥಳನಾಮಗಳ ಮೂಲಕ ಸಾಮಾಜಿಕವಾಗಿ ಉಂಟಾಗುವ ಸಾಂಸ್ಕೃತಿಕ ಪ್ರಕ್ರಿಯೆಗಳನ್ನು ತಿಳಿಯಲು ಸಾಧ್ಯವಿದೆ. ಸಮಾಜದಲ್ಲಿನ ವಿಭಿನ್ನ ಸಂಸ್ಕೃತಿಯ ಚಹರೆಗಳನ್ನು ಸ್ಥಳನಾಮಗಳು ಹೇಗಿ ಗುರುತಿಸಿ ಮಾರ್ಗಗಳನ್ನು ನಿರ್ಮಿಸುತ್ತಾ, ಪ್ರತಿನಿಧಿಯಾಗಿ, ಮೂಲಾಧಾರಗಳಾಗಿ ನಿಲ್ಲುತ್ತವೆ ಎಂಬುದನ್ನು ವಿವಿಧ ಸಾಮಾಜಿಕ ಆಯಾಮಗಳಿಂದ ಸ್ಥೂಲವಾಗಿ ಚರ್ಚಿಸಲಾಗಿದೆ.

**೩.೧ ಜಾತಿ ವಾಚಿ ಸ್ಥಳನಾಮಗಳು**

ಸಾಮಾಜಿಕ ಅಧ್ಯಯನದಲ್ಲಿ ಪ್ರಮುಖವಾದ ಅಂಶವೆಂದರೆ ಜಾತಿ ಮತ್ತು ವೃತ್ತಿಗಳು. ಜಾತಿಯು ಹುಟ್ಟಿದೊಂದಿಗೆ ಗುರುತಿಸಲ್ಪಡುತ್ತದೆ ಅದು ನಿರ್ದಿಷ್ಟವಾಗಿ ಸ್ಥಳನಾಮಗಳಲ್ಲಿ ಬಳಕೆಯಾಗಿ ಜಾತಿವಾಚಿ ಸ್ಥಳನಾಮಗಳಾದವು. ಜಾತಿ ಸೂಚಕ ಸ್ಥಳನಾಮಗಳು ಆ ಪ್ರದೇಶದ ಸಮಾಜವನ್ನು ಬಿಂಬಿಸುತ್ತವೆ "ಲಿಖಿತ ಆಧಾರಗಳ ಕೊರತೆಯಿದ್ದಲ್ಲಿ, ಒಂದು ಜನಾಂಗವು ನೆಲೆಸಿದ್ದ, ಒಂದು ಪ್ರದೇಶದ ಸ್ಥಳನಾಮಗಳಲ್ಲಿನ ಸಮಾನ ರೂಪಗಳನ್ನು ಪರಿಶೀಲಿಸಬೇಕು"[೭] ಹೀಗಾಗಿ ಜಾತಿ–ವೃತ್ತಿಗಳು ಪ್ರಾಚೀನ ಸಾಮಾಜಿಕ ಅಂಶಗಳನ್ನು ಗಮನಿಸಲು ಸ್ಥಳನಾಮಗಳು ಪ್ರಮುಖ ಆಕರಗಳಗಿವೆ. ಅಲ್ಲದೆ ಇತಿಹಾಸ ಪೂರ್ವಕಾಲದ ಅನೇಕ ವಿಚಾರಗಳನ್ನು ತಿಳಿಯಲು ಸಾಧ್ಯವಾಗುತ್ತದೆ. "ಸಮಾಜದಲ್ಲಿನ ವರ್ಣವ್ಯವಸ್ಥೆ, ನಾಗರಿಕತೆ, ಸಂಸ್ಕೃತಿಯನ್ನು ತಿಳಿಯಲು ಸಾಧ್ಯವಾಗುತ್ತದೆ."[೮] ಸ್ಥಳನಾಮಗಳು ಈ ರೀತಿಯ ಯಾವುದೇ ಸಾಮಾಜಿಕ ಅಂಶಗಳನ್ನು ಎಲ್ಲಾ ಸಂದರ್ಭದಲ್ಲಿಯಾ ನೇರವಾಗಿ ಬಿಂಬಿಸದಿದ್ದರೂ ಸಂಸ್ಕೃತಿ ಪಳಿಯುಳಿಕೆಯಂಥಹ ಅವಶೇಷಗಳಾಗಿರುವುದರಿಂದ ಅವು ಪರೋಕ್ಷವಾಗಿಯಾದರೂ ಜನತೆ ಮತ್ತು ನಿರ್ದಿಷ್ಟಕಾಲದ ಸಮಾಜದ ಕುರಿತು ಅತ್ಯಂತ ಉಪಯುಕ್ತ ಮಾಹಿತಿಯನ್ನು ನೀಡುತ್ತವೆ.

ಮೊದಮೊದಲು ಮನುಷ್ಯನು ತಾನ್ನ ವಾಸ್ತವ್ಯಗಳಿಗೆ ನಿಸರ್ಗದ ನಾಮಗಳನ್ನಿಟ್ಟನು ಬರಬರುತ್ತ ನಾಗರಿಕನಾದಮೇಲೆ ವ್ಯಕ್ತಿ, ಜಾತಿ, ವೃತ್ತಿ, ದೈವವಾಚಿ ಅಂಶಗಳನ್ನು ಸ್ಥಳನಾಮಗಳಲ್ಲಿ ವಿಶಿಷ್ಟಗಳನ್ನಾಗಿ ಬಳಸಿಕೊಂಡಿದ್ದಾನೆ.

**ಜಾತಿ ವಾಚಿ ಸ್ಥಳನಾಮಗಳ ಪಟ್ಟಿ**

೧. ಕಾತರಕಿ

೨. ಕುಂದರಗಿ

೩.	ಕೊಂತಿಕಲ್ಲ

೪.	ತುಂಬರ ಮಟ್ಟಿ

೫.	ಕೋಲೂರು

೬.	ಮುಂಡಗನೂರೂ

೭.	ಟಕ್ಕಳಕಿ

೮.	ಬಾದರದಿನ್ನಿ

**ಕಾತರಕಿ:** ಒಂದು ಜನಾಂಗವಿದ್ದು ಅಥವಾ ಕಿಳ್ಳೀಕೇತರೆಂಬ ಕ್ಯಾತರ್ ಎಂಬ ಹೆಸರಿನ ಪ್ರಾಚೀನ ಜನಾಂಗವೊಂದು ಈ ಪ್ರದೇಶದಲ್ಲಿ ವಾಸಿಸುತ್ತಿದ್ದುದರಿಂದ ಕ್ಯಾತರು ಎಂದಾಯಿತು

**ಕುಂದರಗಿ:** ಕುಂದರು ಎಂಬ ಜನಾಂಗ ಈ ಪ್ರದೇಶದಲ್ಲಿ ವಾಸಿಸಿರುವುದರಿಂದ ಈ ಸ್ಥಲನಾಮ ಬಂದಿದೆ.

**ಕೊಂತಿಕಲ್ಲ:** ಕೊಂತಿಗಳು ಅಂದರೆ ಬೆಸ್ತರ ಜನಾಂಗ ಅಂದರೆ ಅಂಬಿಗರು ಇರುವ ಊರು, ಕೃಷ್ಣಾ ನದಿಯ ದಡದಲ್ಲಿರುವುದರಿಂದ ಊರಿಗೆ ಕೊಂತಿಕಲ್ಲೆಂದು ಹೆಸರು ಬಂದಿದೆ.

**ತುಂಬರಮಟ್ಟಿ:** ತುಂಬರು ಈ ಸ್ಥಳದಲ್ಲಿ ವಾಸವಾಗಿದ್ದರು ಊರಿನ ಗುಡಿಯಲ್ಲಿ ಹಬ್ಬಿರುವ ಗುಡ್ಡಗಳ ಸಾಲನ್ನು ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ ಈ ಗುಡ್ಡದ ತುಂಬರು ಜನಾಂಗ ವಾಸಿಸುವುದರಿಂದ ತುಂಬರಮಟ್ಟಿ ಎಂದಾಯಿತ್ತು.

ತುಂಬರು+ಮಟ್ಟಿ: ತುಮ್ಮರಮಟ್ಟಿ.

**ಕೋಲೂರು:** ಕೋಲರು ಎಂದರೆ ವೇಷಧಾರಿಗಳು ಎಂದರ್ಥ ಈ ಕೋಲರು+ಊರು–ಕೋಲೂರು. ಕೋಲ ಎಂದರೆ ನಮ್ಮ ಆದಿವಾಸಿಗಳು ಬೇಡ, ಬಿಲ್ಲರೂ, ಅಂಬಿಗರು ಎಂದರ್ಥ

**ಮುಂಡಗನೂರು:** ಮುಂಡರು ಎಂದರೆ ರಾಕ್ಷಸ–ಶಂಬಾ ಜೋಶಿಯವರ "ಎಡೆಗಳು ಹೇಳುವ ಕಂನಾಡಕತೆ"ಯಲ್ಲಿ ಚರ್ಚಿಸುತ್ತಾ ಕೋಲರು[೧೦] ಮತ್ತು ಮುಂಡರ ಕುರಿತು ಹೇಳಿದ್ದಾರೆ,

**ಟಕ್ಕಳಕಿ:** ಟಕ್ಕ ಎಂಬುದು ಪ್ರಾಚೀನ ಜನದ ಹೆಸರಿನವರು ಊರ ಸಂದಂಧವಿರಬಹುದು, ಟಕ್ಕಾರು ಪಂಜಾಬದಿಂದ ಬಂದವರು. ಅಲ್ಲದೆ ಪುರಾಣ ಕಥೆಗಳಲ್ಲಿ ತಸ್ಕರ ಎಂಬ ಜನವೇ ಟಕ್ಕರರಾಗಿರ ಬಹುದು, ಅದು ಠಾಕರ: ಠಕ್ಕಾರ: ಟಕ್ಕಾರು:

ಟಕ್ಕಾದ; ಟಕ್ಕಳಕಿ[೧೧] ಆ ನಾಡಿನವರು ಕಂನಾಡಿಗೆ ಬಂದದ್ದರಿಂದ ಟಕ್ಕಾಳಕಿ ಆಗಿದೆ.

**೩.೨ ವೃತ್ತಿವಾಚಿ ಸ್ಥಳನಾಮಗಳು**

ಮಾನವ ಸಾಮೂಹ ಒಂದು ಕಡೆ ನೆಲೆ ನಿಂತದರಿಂದಲೇ ಸ್ಥಳನಾಮ ರೂಪಗೊಂಡವು. ಈ ಸಮೂಹವು ಒಂದು ನಿರ್ದಿಷ್ಟ ಕಸುಬನ್ನು ಹೊಂದಿದ್ದು ಇಲ್ಲಿ ವಿಶೇಷವಾಗಿ ಆ ಗ್ರಾಮವೇ ಈ ವೃತ್ತಿಯನ್ನು ಮಾಡುವ ಜನಸಮುದಾಯ ಇರಬಹುದು, ಇರಲಿಕ್ಕಿಲ್ಲ ಆದರೆ ಬಹುಪಾಲು ಅದೇ ವೃತ್ತಿಯನ್ನು ಪಡೆದ ಜನವಿರಬಹುದು, ಸಮಾಜವು ವೃತ್ತಿಯ ಜನರನ್ನು ಅವಲಂಬಿಸಿತ್ತು,

ಊರುಗಳು ರೂಪುಗೊಳ್ಳವಾಗ ಜನರು ಮಾಡುತ್ತಿದ ವೃತ್ತಿಸೂಚಕ್ ಘಟಕಗಳು "ವೈಶಿಷ್ಠ"ವಾಗಿ ಬಳಕೆಯಾಗಿದ್ದರೆ ಅವುಗಳು ವೃತ್ತಿಸೂಚಕ ಸ್ಥಾಳನಾಮಗಳೆಂದು ಕರೆಯುತ್ತಾರೆ.

**ವೃತ್ತಿ ಸೂಚಿ ಸ್ಥಲನಾಮಗಳು**

೧. ಕೋವಳ್ಳಿ

೨. ಚಿನಿವಾಲರ ಕೊಪ್ಪ

೩. ಬಾದರದಿನ್ನಿ

ಕೋವಳ್ಳಿ: ಕೋವ ಎಂದರೆ ಮಣ್ಣಿನ ಮಡಕೆಗಳನ್ನು ಮಾಡುವವಾರು, ಕುಂಬಾರರು ಕೋವರು ಇರುವ ಹೆಳ್ಳಿಯೇ ಕೋವಳ್ಳಿ ಎಂದಾಯಿತ್ತು ಎಂದು ಹೇಳಬಹುದು

**ಕೋವ+ಹಳ್ಳಿ= ಕೋವಳ್ಳಿ (ಹಕಾರಲೊಪ)**

ಚಿನಿವಾಲರ ಕೊಪ್ಪ: ಚಿನಿವಾಲರ ಎಂದರೆ ಅಕ್ಕಸಾಲಿಗ ಎಂಬ ವೃತ್ತಿ ಸೂಚಕಪದ ವೃತ್ತಿಯವರು ಹೆಚ್ಚಾಗಿ ಇರುವುದರಿಂದ ವೃತ್ತಿಯೇ ಸ್ಥಳನಾಮವಾಗಿ ಕೊಪ್ಪ: ಎಂದರೆ ಹಲವಾರು ಜನರು ವಾಸಿಸುವ ಕೇರಿ ಅಥವಾ ಸಣ್ಣಹಳ್ಳಿ

**ಚಿನಿವಾಲರ+ಕೊಪ್ಪ= ಚಿನಿವಾಲರಕೊಪ್ಪ**

ಬಾದರದಿನ್ನಿ: ಬಾದರದಿನ್ನಿ ಈ ಊರಿನಲ್ಲಿ ಬೇಡರು ಹೆಚ್ಚಾಗಿರುವುದರಿಂದ ಆಂಗ್ಲರ ಬೇಡರದಿನ್ನಿ ಎನ್ನುವುದು ಬಾದರ ಆಗಿರುವುದು.

**೪. ಸಂಕೀರ್ಣ ವಾಚಿ ಸ್ಥಳನಾಮಗಳು**

ಸ್ಥಳ ನಾಮಗಳು ಅಧ್ಯಯನದಲ್ಲಿ, ನಿದಿಷ್ಟ ಭಾಗಗಳಿಗೆ ಅನುಸಾರವಾಗಿ, ವರ್ಗೀಕರಣ ಮಾಡಿಕೊಳ್ಳಿವಿಕೆ ಸಾಮಾನ್ಯವಾಗಿದೆ. ನಿರ್ದಿಷ್ಟ ಬಗಗಳಲ್ಲಿ ವೈವಿಧ್ಯಕಂಡುಬರುತ್ತಾದೆ. ಇಂತಹ ವೈವಿಧ್ಯ ಲಕ್ಷಣಗಳಿಂದ ವರ್ಗೀಕರಣ ಮಾದರಿಯನ್ನಾ ಸಿದ್ದಪಡಿಸಲಾಗುತ್ತದೆ. ಸ್ಥಳನಾಮದಲ್ಲಿ

ಬಳಕೆಯಾಗಿರುವ 'ವಿಶಿಷ್ಟ'ಗಳು ಪ್ರತ್ಯೇಕವಾದ ಲಕ್ಷಣಗಳನ್ನು ಹೊಂದಿರುತ್ತವೆ. ಇಂತಹ ವೈವಿಧ್ಯ ಲಕ್ಷಣಗಳನ್ನೊಳಗೊಂಡ "ಸಂಕೀರ್ಣ ಸ್ಥಳನಾಮಗಳು" ಎಂದು ಗುರುತಿಸಲಾಗಿದೆ. ಇವುಗಳು ಯಾವುದೇ ವಾರ್ಗಿಕಗಳನ್ನು ಹೊಂದಿರುವುದಿಲ್ಲ. ಏಕಘಟಕಗಳಾಗಿ ಬಳಕೆಯಲ್ಲಿರುತ್ತವೆ.

**೪.೧ ಸಾಪೇಕ್ಷ ಸ್ಥಳನಾಮಗಳು**

ಮಾನವನು ನೆಲೆಯೂರಿದಾಗ ಕಾಲಾಂತರದ ಜನಸಂಖ್ಯೆ ಹೆಚ್ಚಾದಂತೆ, ಸ್ಥಳನಾಮಗಳು ಹೆಚ್ಚಾಗುತ್ತವೆ. ಆ ಗ್ರಾಮ ಸರ್ವತೋಮುಖ ಬೆಳವಣಿಗೆಯಾದಂತೆ. ಸಾಮಾಜಿಕ ವ್ಯವಸ್ಥೆಯನ್ನು ಸುಧಾರಿಸಬೇಕಾಗುತ್ತದೆ. ಆವಾಗ ಸ್ಥಳಾಂತರವಾಗುವುದು ಸಹಜ. ಅವರು ಅನುಕೂಲಕರವಾದ ಮತ್ತೊಂದು ಸ್ಥಳದಲ್ಲಿ ನೆಲೆನಿಲ್ಲುತ್ತಾರೆ. ಈ ಹೊಸ ನೆಲೆಗೆ ಸೇರಿದ ಜನರ ಮೂಲ ಸ್ಥಳದಿಂದ ಬೇರ್ಪಡೆಯಾದರೂ ತಮ್ಮ ಊರಿನ ಬಗ್ಗೆ ಇರುವ ಅಭಿಮಾನ ಗೌರವದಿಂದಾಗಿ ಆ ಹೆಸರನ್ನೆ ಮುಂದುವರೆಸುತ್ತಾರೆ. ಹೀಗೆ ಮೂಲ ಊರಿನ ಹೆಸರಿನ ಸಾಪೇಕ್ಷವಾದ ಹೆಸರನ್ನೆ ನಾಮಕರಣಮಾಡುತ್ತಾರೆ, ಹೀಗಿರುವಾಗ ಗೊಂದಲ ಉಂಟಾಗುತ್ತವೆ. ಅವಾಗ ಬುದ್ದಿವಂತಿಕೆಯಿಂದ ವಿಶೇಷಣಗಳನ್ನು ಕೊಡುತ್ತಾ. ಗಾತ್ರದ ದೃಷ್ಟಿಯಿಂದಲೂ ದಿಗ್ವಾಚಕ ದೃಷ್ಟಿಯಿಂದಲೂ – ವರ್ಣಸೂಚಕ ದೃಷ್ಟಿಯಿಂದಲೂ ಪ್ರತಿಕರಣದಿಂದಲೂ, ವಸತಿ,– ನಿರ್ವಸತಿ,– ಪುನರ್‌ವಸತಿ,– ವ್ಯಾಪಾರ ನಗರಗಳ ದೃಷ್ಟಿಯಿಂದ ಕರೆಯುತ್ತಾನೆ.

**೪.೨ ಸಾಪೇಕ್ಷ ಸ್ಥಳನಾಮಗಳು : ಪರಿಮಾಣ ಸೂಚಕ**

ಒಂದೇ ಹೆಸರಿನ ಎರಡು ಊರುಗಳಿದ್ದಲ್ಲಿ, ಇವೆರಡು ವೈರುಧ್ಯ ಗುಣವಿರುವ ವಿಶೇಷಣಗಳನ್ನು ಪೂರ್ವಪದವಾಗಿ ನಿರ್ದಿಷ್ಟ ಮತ್ತು ಸಾಮಾನ್ಯ ವಾರ್ಗಿಕಗಳಲ್ಲಿ ಬದಲಾವಣೆಗಳೇನು ಇರುವುದಲ್ಲ

ಉದಾ :

ಚಿಕ್ಕ ಗಲಗಲಿ – ದೊಡ್ಡಗಲಗಲಿ

ಚಿಕ್ಕ ಆಲಗುಂಡಿ – ಹಿರೇ ಆಲಗುಂಡಿ

**ಬಳ್ಳೂರು:** ಬಳ್ಳ ಎಂದರೆ ಒಂದು ಅಳತೆ. ನಾಲ್ಕು ಸೇರಿನ ಅಳತೆ. (ಕ.ನಿಂ.೬೩೩೫) ಹಿಂದೆ ಬೆಳೆದ ಕಾಳನ್ನು ಮಾಪನ ಮಾಡುವ ಊರು ಇದಾದುದರಿಂದ ಬಳ್ಳ+ಊರು ಬಳ್ಳೂರು ಎಂದು ಕರೆಯಲಾಗಿದೆ.

**ಚಿಕ್ಕ ಸಂಗಮ:** ಬಾಗಲಕೋಟ ಜಿಲ್ಲೆಯಲ್ಲಿ ಎಡು ಸಂಗಮಗಳಿರುವುದರಿಂದ ಅವೆರಡು ಐತಿಹಾಸಿಕ ಸಾಕ್ಷೇತ್ರಗಳಾದ್ದರಿಂದ ಗುರುತಿಸಲು ಚಿಕ್ಕ ಸಂಗಮ ಎಂದು ಹೆಸರಿಸಿದರು.

**ಚಿಕ್ಕ ಹಂಚಿನಾಳ:** ಇನಾಂ ಹಂಚಿನಾಳು (ಇನಾಮು– ಉಡುಗೊರೆಯಾಗಿ ಕೊಟ್ಟದ್ದು) ಪ್ರಾಚೀನ ಕಾಲದಿಂದಲೂ ಭೂಮಿಯನ್ನು ಇನಾಮು ರೂಪದಲ್ಲಿ ನೀಡುವ ಸಂಪ್ರದಾಯ ರೂಢಿಯಲ್ಲಿದೆ

ಗ್ರಾಮೀಣ ಸಮುದಾಯಕ್ಕೆ ಅಪೂರ್ವ ಸೇವೆಸಲ್ಲಿಸಿದವರಿಗೆ ಸರಕಾರಿ ಜಮೀನುಗಳನ್ನು ಮಂಜೂರು ಮಾಡುತ್ತಿದ್ದವು. ಹಾಗಾಗಿ ಸೊನ್ನದ ದೇಸಾಯಿಯವರಿಗೆ ಇನಾಮಾಗಿ ಕೊಟ್ಟ ಹದಿನಾಲ್ಕು ಗ್ರಾಮಗಳಲ್ಲಿ ಇದು ಒಂದು.

**ಹೆಗ್ಗೂರು:** ಶಾಸನದಲ್ಲಿ ಪೆರ್ಗೂರು ಎಂದು ಪಿರಿದಾದ + ಊರು ಪೆಗೂರು, ಹೆಗ್ಗೂಗುರು ಚಿಕ್ಕ ಚಿಕ್ಕ ಊರುಗಳಿರುವುದರಿಂದ ಗುರುತಿಸಲು ಇದಕ್ಕೆ ಹೆಗ್ಗೂಗುರು ಎಂದು ಹೆಸರಿಸಿದ್ದಾರೆ ಎಂದು ದಾಖಲೆ ಸಿಗುತ್ತವೆ. ಹೆಗ್ಗೂಗುರು ಶಾಸನ ಕ್ರಿ.ಶ. ೧೦೨೪ (ಎಸ್.ಐ.ಐ. XV)

**೪.೩ ಸಾಪೇಕ್ಷ ಸ್ಥಳನಾಮಗಳು:**

ಆಡಳಿತ ದೃಷ್ಟಿಯಿಂದ ಬೀಳಗಿ ತಾಲೂಕು ಆದಿಲ್‌ಶಾಹಿ ಆಳ್ವಿಕೆಯಲ್ಲಿ ಸಮ್ಮತ್ ಎಂದಾಗಿ ಪರಿಗಣಿಸಿತ್ತು. ಆದಿಲ್‌ಶಾಹಿ-೨ ನ, ಅಧಿಕಾರಿ ಯಾಕೂತ್‌ಖಾನ್‌ನ ಅಧೀನ ಸಮ್ಮತ್ ಬೀಳಗಿಯ ಮೊಖಾಸೆ ಖಂಡೆರಾವ್ ಪಂಡಿತ ಮಹದೇವ ಪಂಡಿತನ ಮಗ ವಿಸಾಜಿ ಪಂಡಿತ ಆಳ್ವಿಕೆಯನ್ನು ನಡೆಸುತ್ತಿದ್ದನು- ಹೀಗೆ "ಸಮ್ಮತ್" ಎಂದು ಗುರುತಿಸಿದ ಪ್ರದೇಶಗಳು ಇವೆ, ಮತ್ತು ಒಂದೇ ತೆರನಾದ ಹೆಸರುಳ್ಳ ಸ್ಥಳನಾಮಗಳಿಗೆ "ಸಮ್ಮತ್" ಎಂದು ಗುರುತಿಸಿದ್ದಾರೆ.

ಉದಾಹರಣೆ:

ಅ. ಲಿಂಗಾಪುರ ಎಸ್.ಕೆ. (ಸಮ್ಮತ್, ಕಾತರಕಿ)

ಆ. ಲಿಂಗಾಪುರ ಎಸ್.ಆರ್. (ಸಮ್ಮತ್ ರೊಳ್ಳಿ)

ಇ. ಬೂದಿಹಾಳ ಎಸ್.ಎಚ್. (ಸಮ್ಮತ್ ಹವೇರಿ)

ಈ. ಬೂದಿಹಾಳ ಎಸ್.ಜಿ. (ಸಮ್ಮತ್ ಗಲಗಲಿ)

ಉ. ಕೊಪ್ಪ ಎಸ್.ಕೆ. (ಸಮ್ಮತ್ ಕಾತರಕಿ)

ಊ. ಕೊಪ್ಪ ಎಸ್.ಆರ್. (ಸಮ್ಮತ್ ರೊಳ್ಳಿ)

**೪.೪ ಸಾಪೇಕ್ಷ ಸ್ಥಳನಾಮಗಳು: ವರ್ಣಸೂಚಕ**

ಬಣ್ಣ / ಲೋಹ ಸೂಚಕ: ವಿವಿಧತೆಯಲ್ಲಿ ಏಕತೆಯಿರುತ್ತದೆ ಎನ್ನುವಂತೆ ಸ್ಥಳನಾಮಗಳ ವೈವಿಧ್ಯತೆಯ ಬಳಸುವ ವಿಶಿಷ್ಟವಾಗಿ ಬಳಕೆಯಾಗಿರುವ ಪೂರ್ವ ಘಟಕದ ಪರವಾಗಿ ವರ್ಣ ಹಾಗೂ ಲೋಹ ಸೂಚಕ ವಿಶೇಷಣಗಳನ್ನು ಗುರುತಿಸುತ್ತೇವೆ. ಈ ವಿಶೇಷ ವಿಶಿಷ್ಟಗಳು ಹೆಸರಿಡಲು ನೆರೆಯ ಹಳ್ಳಿಯವರು ಕಾರಣರಾಗಿರುತ್ತಾರೆ ಎಂಬುದು ಅಧ್ಯಯನದಿಂದ ತಿಳಿದು ಬರುತ್ತವೆ.

**ಕಂದಗಲ್ಲ:** ಕಂದ + ಕಲ್ಲ : ಇಲ್ಲಿನ ಕಲ್ಲಿನ ಬಣ್ಣ ಕಂದು ಆಗಿರುವುದರಿಂದ ಕಂದಗಲ್ಲ ಎಂದು ಗುರುತಿಸಿದರು.

**ಧವಳೇಶ್ವರ:** ದವಲ>ಧವಳ+ಈಶ್ವರ=ಧವಳೇಶ್ವರ ಈ ಗ್ರಾಮದಲ್ಲಿ ಶ್ವೇತ ವರ್ಣದ ಈಶ್ವರ ಇರುವುದರಿಂದ ಈ ಗ್ರಾಮಕ್ಕೆ ಧವಳೇಶ್ವರ ಎಂದು ಕರೆಯಲಾಗಿದೆ.

**೪.೫ ಲೋಹ ಸೂಚಿತ ಸ್ಥಳನಾಮ:**

**ಸೊನ್ನ:** ಆದರ್ಶವಾಚಿ: ಇಲ್ಲಿಯ ಭೂಮಿಯ ಗುಣವು ಬಂಗಾರದಂತಹ ಭೂಮಿಯನ್ನುಳ್ಳ ಪ್ರದೇಶ ಎಂಬರ್ಥ. ಈ ಪ್ರದೇಶ ಕಬ್ಬು ಬೆಳೆಯುವುದಕ್ಕೆ ಪ್ರಸಿದ್ಧವಾಗಿದೆ. ಕಬ್ಬು ಶ್ರೀಮಂತ ಬೆಳೆಯಾದ್ದರಿಂದ ನಾಮ ಬಂದಿರಬಹುದು.

**ಹೊನ್ನ > ಸೊನ್ನ**

**ಹೊನ್ನಿಹಾಳ:** ಈ ಪ್ರದೇಶವು ಫಲವತ್ತಾದ ಭೂಮಿಯನ್ನು ಹೊಂದಿರುವು ದರಿಂದಲೂ "ಹಾಳ" ಎಂಬ ವಾರ್ಗಿಕವಿರುವ ಸ್ಥಳಗಳು ಹಲವಾರು ಇರುವುದರಿಂದ ಗುರುತಿಸಲು ಹೊನ್ನಿನ + ಹಾಳ= ಹೊನ್ನಿಹಾಳ ಎಂದು ಕರೆದಿರಬಹುದು.

**೪.೬ ಪ್ರತೀಕರಣ ಸೂಚಿ ಸ್ಥಳನಾಮಗಳು:**

ಪ್ರತಿಕರಣ ಎಂದರೆ ಪ್ರತಿಧ್ವನಿ, ಅನುಕರಣೆ ಎಂದರ್ಥ. ಬೇರೆ ಬೇರೆ ಭೂಪ್ರದೇಶದಲ್ಲಿ ಒಂದೇ ರೀತಿಯ ವಿಶಿಷ್ಟ ಹಾಗೂ ವಾರ್ಗಿಕಗಳನ್ನು ಹೊಂದಿರುವ ಸ್ಥಳನಾಮಗಳನ್ನು ಕಾಣುತ್ತೇವೆ. ಅವು ಉದ್ದೇಶಪೂರ್ವಕವಾಗಿದ್ದರೆ. ಅನುಕರಣೆ ಎಂದು ಸಹಜವಾಗಿದ್ದರೆ ಪ್ರತಿಕರಣ ಎಂದು ಗುರುತಿಸಬೇಕಾಗುವುದು.

ಒಂದೇ ಭಾಷೆಯ ಬಳಕೆ ಭೌಗೋಳಿಕ ಲಕ್ಷಣ ಜೀವನದ ರೀತಿಗಳ ಸಾಮ್ಯತೆಗಳು ಸಾಂಸ್ಕೃತಿಕ ಅಂಶಗಳು ಪ್ರತಿಕರಣ ಸ್ಥಳನಾಮಗಳಿಗೆ ಕಾರಣಗಳಾಗುತ್ತವೆ. ಬೀಳಗಿ ತಾಲೂಕಿನಲ್ಲಿ ಪ್ರತಿಕರಣಗೊಂಡ, ಸ್ಥಳನಾಮಗಳನ್ನು ಗುರುತಿಸಲಾಗಿದೆ. ಈ ಹಿಂದೆ ಈ ಪ್ರದೇಶವನ್ನು ಬೇರೆಡೆಯಿಂದ ಆಡಳಿತ ನಡೆಸುತ್ತಿದ್ದುದರಿಂದ "ಸಮ್ಮತ್" ಎಂಬ ಹೆಸರಿನಿಂದ ಕರೆಯಲಾಗಿತ್ತು. ಇದು ಈಗಲೂ ಮುಂದುವರಿದಿದೆ.

ಉದಾ:

೧. ಲಿಂಗಾಪುರ (ಸಮ್ಮತ್ ಕಾತರಕಿ.)
   ಲಿಂಗಾಪುರ (ಸಮ್ಮತ್ ರೊಳ್ಳಿ)
೨. ಬೂದಿಹಾಳ (ಸಮ್ಮತ್ ಹವೇಲಿ)

ಬೂದಿಹಾಳ (ಸಮ್ಮತ್ ಗಲಗಲಿ)

೩. ಕೊಪ್ಪ (ಸಮ್ಮತ್ ಕಾತರಕಿ)

ಕೊಪ್ಪ (ಸಮ್ಮತ್ ರೊಳ್ಳಿ)

**೪.೭ ಸಂಕೀರ್ಣ ಸ್ಥಳನಾಮಗಳು**

**ಕೊರ್ತಿ:** ಇದು ನಿಸರ್ಗವಾಚಿ ರೂಪವಾಗಿದೆ. ಈ ಊರು ಕೃಷ್ಣಾ ನದಿ ದಂಡೆಯಲ್ಲಿರುವುದರಿಂದ ಇಲ್ಲಿ ಯಾವಾಗಲೂ ನೀರಿನ ಸೆಲೆ ಇರುತ್ತಿದ್ದುದರ ಸೂಚಕವಾಗಿ ಒರತಿಯೇ ಕೊರತೆಯಾಗಿ ಕೊರ್ತಿಯಾಗಿದೆ.

**ಕೊರ್ತಿ: ಒರತಿ> ಹೊರತಿ=ಕೊರ್ತಿ**

**ಬಾಡಗಿ:** ವಾಡಬ ಎಂದರೆ ಬ್ರಾಹ್ಮಣ ಎಂದರ್ಥ. ಈ ಊರಲ್ಲಿ ಬ್ರಾಹ್ಮಣ ಸಮಾಜದವರು ಹೆಚ್ಚಾಗಿರುವರು. ಶಾಸನಗಳಲ್ಲಿ ಈ ಊರು ವಿದ್ಯಾವಂತರ ಊರೆಂದು ಪ್ರಸಿದ್ಧಿ ಪಡೆದಿದೆ. ಹಿಂದಿನ ಕಾಲದಲ್ಲಿ ಬ್ರಾಹ್ಮಣರೇ ಹೆಚ್ಚಾಗಿ ವಿದ್ಯಾವಂತರಾಗಿರುತ್ತಿದ್ದರು. ಹೀಗಾಗಿ ಆ ಊರಿಗೆ ಬಾಡಗಿ ಎಂಬ ಹೆಸರು ಬಂದಿದೆ. ಅಲ್ಲದೇ ಈಊರಿನಲ್ಲಿ ಅಗ್ರಹಾರ ಇದೆ ಎಂದು ಬಾಡಗಿ ಶಾಸನದಿಂದ ತಿಳಿದುಬರುತ್ತದೆ.

**ವಾಡಬ > ಬಾಡ + ಕೆಯ್ = ಬಾಡಗಿ**

**ರಬಕವಿ:** ಇದು ವಸತಿವಾಚಿ ರೂಪವಾಗಿದೆ. ರವ ಎಂದರೆ ಗೌಜು, ಗಲಾಟೆ ಎಂದರ್ಥ. ಗವಿ ಎಂದರೆ> ಕವಿ ಎಂದರೆ ಆವರಿಸು. ಒಂದು ಕಾಲದಲ್ಲಿ ಇದು ಜನದಟ್ಟಣೆಯುಳ್ಳ ಪ್ರದೇಶವಾಗಿದ್ದರಿಂದ ರವಗವಿಯೇ ರಬಕವಿಯಾಗಿರಬಹುದಾಗಿದೆ.

**ರಬ>ರಬ+ಗವಿ>ಕವಿ=ರಬಕವಿ**

**ಪುನರ್ ನಾಮಕರಣಗೊಂಡ ಸ್ಥಳ ನಾಮಗಳು:** ಹಿಂದಿನಿಂದಲೂ ಬಂದ ಸ್ಥಳನಾಮವು ಒಂದು ಕಾಲ ಘಟ್ಟಕ್ಕೆ ಒಬ್ಬ ವ್ಯಕ್ತಿ ಅಥವಾ ಪ್ರಸಿದ್ಧಿ ದೈವದ ಹೆಸರನ್ನಿಟ್ಟು ಪುನರ್ ನಾಮಕರಣ ಮಾಡಿರುವುದು ಕೆಲವು ಗ್ರಾಮಗಳ ಹೆಸರುಗಳಲ್ಲಿ ಸೂಚಿತವಾಗಿದೆ. ಉದಾ: ಇನಾಮು ಹಂಚಿನಾಳ ಇದು ಸೊನ್ನದ ದೇಸಗತಿಯ ಹದಿನಾಲ್ಕು ಗ್ರಾಮಗಳಲ್ಲಿ ಒಂದು ಮುಂದೆ ಈ ಊರಿನ ದೈವ ಬಸವೇಶ್ವರರ ಹೆಸರಿನಲ್ಲಿ ಪುನರ್

ನಾಮಕರಣ ಮಾಡಲಾಯಿತು. ಅದಕ್ಕೆ ಬಸವ ಹಂಚಿನಾಳ ಎಂದು ಕರೆಯುತ್ತಾರೆ.

**೪.೮ ವಸತಿ- ನಿರ್ವಸಿತ- ಪುನರ್ವಸತಿ**

**ಡ. ೮.೧. ವಸತಿ:** ಜನರ ವಾಸ್ತವ್ಯ ಸೂಚಿಸುವ ಸ್ಥಳಗಳಿಗೆ ವಸತಿ ಸೂಚಿತ ಸ್ಥಳನಾಮಗಳೆಂದು ಇವು ಪ್ರಾಚೀನತೆ ಹೊಂದಿರಬಹುದು, ಜನವಸತಿಯ ನೆಲೆಗಳಿಗೆ ನೆರೆಯ ಹಳ್ಳಿಗರು ಹೆಸರಿಸಲೂಬಹುದು. ಅಲ್ಲದೇ ಆಧುನಿಕತೆಯಿಂದಾಗಿ ತಮ್ಮ ನೆಲೆಗೆ ತಾವೇ ಹೆಸರಿಟ್ಟಿರಬಹುದು. ಇಂತಹ ಹೆಸರು ಯಾದೃಚ್ಛಿಕತೆಯಾದಲ್ಲಿ ಆಯಾ ಪ್ರದೇಶದ ಯಾವುದೇ ಲಕ್ಷಣಗಳು ಗುರುತಿಸಲು ಸಾಧ್ಯವಿಲ್ಲ. ಸ್ಥಳವು ರಾಜಕೀಯ, ಸಾಂಸ್ಕೃತಿಕ ಭಾಷಿಕ ಪೌರಾಣಿಕ ಕಾರಣಗಳಿಂದಾಗಿ ಬದಲಾವಣೆಯಾಗುವ ಸಾಧ್ಯತೆ ಹೆಚ್ಚು.

ಸ್ಥಳನಾಮಗಳು ಚಲನಶೀಲತೆ ಹೊಂದಿರುವುದರಿಮದ ನಿರಂತರ ಬದಲಾವಣೆಯಾಗುತ್ತವೆ.

ಉದಾ:

| ಸ್ಥಳ ನಾಮ | ಪೂರ್ವದ ಹೆಸರು |
|---|---|
| ಬೀಳಗಿ | ಗಂಗೇನಹಳ್ಳಿ |

ಸ್ಥಳೀಯ ಕವಿ ಸಿದ್ದಪ್ಪ ಬಿದರಿಯವರ ಹೇಳಿಕೆ ಆಧರಿಸಿ ಈ ಮೊದಲು ಬೀಳಗಿ ಊರಿಗೆ "ಗಂಗನಹಳ್ಳಿ" ಎಂದು ಕರೆಯುತ್ತಿದ್ದರು ಎಂದು ಹೇಳಿದ್ದಾರೆ.

**೪.೮.೨ ನಿರ್ವಸಿತ:** ಭೌಗೋಳಿಕ ಪರಿಸರದಲ್ಲಿರುವ ನಿರ್ದಿಷ್ಟ ಭೂಭಾಗವನ್ನು, ಗುರುತಿಸುವ ಉದ್ದೇಶದಿಂದ ಹೆಸರನ್ನು ನೀಡಲಾಗುತ್ತದೆ. ಆದರೆ ಈ ಪ್ರದೇಶದಲ್ಲಿ ಜನರ ವಾಸ್ತವ್ಯವಿರುವುದಿಲ್ಲ. ಅಂತಹ ಹೆಸರನ್ನು "ನಿರ್ವಸಿತ ಸ್ಥಳನಾಮಗಳೆಂದು" ಕರೆಯುವುದು. ಇವು ಜನ ವಸತಿಗೆ ಹೊಂದಿಕೊಂಡ ಬೆಟ್ಟ ಗುಡ್ಡ, ರಸ್ತೆ, ಹಳ್ಳ, ಕೊಳ್ಳಗಳಲ್ಲಿ ಅಲ್ಲದೇ ವ್ಯವಸಾಯದ ಭೂವಲಯವನ್ನು ಗುರುತಿಸುವ ಸಲುವಾಗಿ ಹೆಸರಿಸುತ್ತಾರೆ ಅವು ಪೌರಾಣಿಕ ಕಥೆಗಳ ಪ್ರಭಾವದಿಂದ ಹೆಸರಿಸಿರುತ್ತಾರೆ.

ಉದಾ:

೧. ಸಿದ್ಧೇಶ್ವರ ಕ್ಷೇತ್ರ (ಸಿದ್ಧಪ್ಪನ ಕೊಳ್ಳ)- ಬೀಳಗಿ

೨. ಕಪ್ಪರ ಪಡಿಯವ್ವ (ನಾಗರಾಳ)

೩. ಗುಡ್ಡದ ಬಸವಣ್ಣ (ಅಮಲಝುರಿ)

೪. ವಾರಿ ಮಲ್ಲಯ್ಯ (ತೋಳಮಟ್ಟಿ ಗುಡ್ಡ)

೫. ಸಂಗಮನಾಥ ದೇವಾಲಯ (ಚಿಕ್ಕಸಂಗಮ)

೬. ಚೌಡವ್ವ (ಹೊಲದ ಗುರುತು)

೭. ಹಾದಿ ಬಸವಣ್ಣ (ಗರಡದಿನ್ನಿ ಭೂಮಿ)

**ಸಿದ್ಧೇಶ್ವರ ದೇವಾಲಯ:**

ಬೀಳಗಿಯ ನೈರುತ್ಯ ಭಾಗಕ್ಕಿರುವ ಗುಡ್ಡದಲ್ಲಿ ಎರಡು ಮೇಡುಗಳ ಮಧ್ಯದಲ್ಲಿ ಕೊಳ್ಳವಿದೆ, ಆ ಕೊಳ್ಳದ ದಡದಲ್ಲಿ ದೇವಾಲಯವಿದೆ, ಅದುವೇ ಸಿದ್ಧೇಶ್ವರ ದೇವಾಲಯ, ಇದನ್ನು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕಟ್ಟಿಸಲಾಯಿತು ಎಂದು ತಿಳಿಯುತ್ತದೆ. ಇದು ಶ್ರಾವಣದಲ್ಲಿ ಜಾತ್ರೆ ಜರುಗುವುದು ಇದು ನಾಡಿನ ಜಾತ್ರೆಯಾಗಿರುತ್ತದೆ. ಅಲ್ಲದೆ ಇಲ್ಲಿ ಕೊಳ್ಳ ಹರಿದಿರುವುದರಿಂದ "ಸಿದ್ಧಪ್ಪನಕೊಳ್ಳ" ಎಂದು ಕರೆಯುತ್ತಾರೆ.

**ಸಂಗಮನಾಥ ದೇವಾಲಯ:**

ಚಿಕ್ಕ ಸಂಗಮದಲ್ಲಿ– ಸಂಗಮನಾಥ ದೇವಾಲಯವು ಇದು ಕೃಷ್ಣ–ಘಟಪ್ರಭೆಯರ ಸಂಗಮದಲ್ಲಿ ಪುಣ್ಯ ಕ್ಷೇತ್ರವಾಗಿದ್ದು – ಕೃಷ್ಣಾ ಮೇಲ್ದಂಡೆ ಯೋಜನೆಯ ಅಡಿಯಲ್ಲಿ ಮುಳುಗಿ ಪುನಃ ಮೂಲ ದೇವಸ್ಥಾನ ಅದೇ ರೀತಿ ದಡದಲ್ಲಿ ಕಟ್ಟಿಸಲಾಗಿದೆ, ಅಣ್ಣ ಬಸವಣ್ಣನಿಗೆ ಗುರು ಜಾತವೇದ ಮುನಿಗಳು ದೀಕ್ಷೆ ನೀಡಿದ ಸ್ಥಳವು ಎಂದು ಹೇಳುತ್ತಾರೆ.

**ಕಪ್ಪಪಡಿಯವ್ವ:**

ಇದು ವೀರ ಸಿಂಧೂರ ಲಕ್ಷ್ಮಣನ ಆರಾಧ್ಯ ದೈವ ಮತ್ತು ಆತನು ನೆಲೆಸಿದ ಸ್ಥಳ ಹಾಗೂ ಅವನನ್ನು ಹತ್ಯೆ ಮಾಡಲಾದ ಸ್ಥಳವೂ ಹೌದು. ಕಪ್ಪರಪಡಿಯವ್ವ: ಹೆಸರೇ ಸೂಚಿಸುವಂತೆ ಬೃಹದಾಕಾರದ ಪಡೀಕಲ್ಲು ಬಂಡೆ ಇದೆ. ಅದು ಕಪ್ಪಾಗಿರುವುದರಿಂದ ಕಪ್ಪರಪಡಿ ಎಂದು ಬಂದಿದೆ.

ಸಾಮಾನ್ಯವಾಗಿ ಸ್ತ್ರೀದೇವತೆಯಾದ "ಪಡಿಯವ್ವ"ಳಿಗೆ ಕೆಳವರ್ಗದವರು ಹರಕೆಯಂತೆ ಪ್ರಾಣಿ ಬಲಿ (ಬ್ಯಾಟಿ) ನೀಡಲು ಬರುವರು, ಈ ಪ್ರದೇಶದಲ್ಲಿ ಮಾಂಸಕ್ಕೆ ಪರ್ಯಾಯವಾಗಿ "ಕಪ್ಪ" ಎನ್ನುವುದುಂಟು. ಹೆಚ್ಚಾಗಿ ಪ್ರಾಣಿ ಬಲಿ ಆರಾಧನೆಯು ಹೆಚ್ಚಾಗಿರುವುದರಿಂದ "ಕಪ್ಪರ ಕಪ್ಪ (ಮಾಂಸ) ತಿನ್ನುವವರ ಪಡಿಯವ್ವ ಎಂದು ಕರೆದಿರಬಹುದಾಗಿದೆ.

**ಗುಡ್ಡದ ಬಸವಣ್ಣ:**

ಅಮಲಝರಿಯ ದಕ್ಷಿಣಕ್ಕಿರುವ ಗುಡ್ಡದಲ್ಲಿ ಏಕಶಿಲಾ ಬಸವಣ್ಣನಿದ್ದಾನೆ. ಸುತ್ತಲೂ ದೇವಾಲಯ ಪ್ರತಿ ಶ್ರಾವಣದಲ್ಲಿ ಇವನ ಜಾತ್ರೆ ಜರುಗುವುದು, ಅಲ್ಲಿ ರುದ್ರಾಭಿಷೇಕ ಜರುಗುವುದು ಎಂದು ಸ್ಥಾನಿಕರ ಅಭಿಪ್ರಾಯ.

**ವಾರಿ ಮಲ್ಲಯ್ಯ:**

ಉತ್ತರ ಕರ್ನಾಟಕದ ಆರಾಧ್ಯದೈವವಾದ "ಶ್ರೀಶೈಲ ಮಲ್ಲಿಕಾರ್ಜುನ"ನಂತೆ ಇಲ್ಲಿ ಎರಡು ಗುಡ್ಡಗಳಲ್ಲಿ "ವಾರಿ" ಇದೆ ಈ ವಾರಿಯಲ್ಲಿರುವ ಶಿವಲಿಂಗವೇ ಮಲ್ಲಿಕಾರ್ಜುನ ಇವನಿಗೆ ವಾರಿ ಮಲ್ಲಯ್ಯ ಎಂದು ಕರೆಯುವರು, ಶ್ರಾವಣದ ಕೊನೆಯ ಸೋಮವಾರದಂದು ಜಾತ್ರೆ ನೆರವೇರುವುದು.

**ಚೌಡವ್ವ:**

ಕೃಷಿಕರು ತಮ್ಮ ಭೂ ವಲಯದ ಗುರುತಿಸಿಕೊಳ್ಳಲು ಒಂದು ಬನ್ನಿ ಮರದ ಅಡಿಯಲ್ಲಿ ಬೃಹತ್ ಕಲ್ಲುಗಳಿಗೆ ಪೂಜೆ ಸಲ್ಲಿಸಿ "ಚೌಡವ್ವ" ಎಂದು ಕರೆದರು. ಇದು ಜನರಿಗೆ ಬೆಳೆದ ಫಸಲನ್ನು ಕಳ್ಳತನ ಮಾಡದಿರಲೂ ಈ ದೇವಾಲಯವನ್ನು ಸ್ಥಾಪಿಸುತ್ತಿದ್ದರು ಎಂದು ತಿಳಿದಿದೆ. ಇದು ಢವಳೇಶ್ವರ ವ್ಯಾಪ್ತಿಯಲ್ಲಿದೆ.

**ಹಾದಿ ಬಸವಣ್ಣ:**

ನಮ್ಮ ಬಸವಣ್ಣ (ಎತ್ತಿಗೆ)ನಿಗೆ ದೈವದಂತೆ ನೋಡುತ್ತಾರೆ. ಬೀಳಗಿ ಉತ್ತರಕ್ಕಿರುವ ಬಂಡಿ ಹಾದಿಯಲ್ಲಿ ಈ ದೇಗುಲ ಸೃಷ್ಟಿಯಾಗಿದೆ. ದೇಗುಲವು ಹಾದಿಯಲ್ಲಿರುವುದರಿಂದ ಹಾದಿ ಬಸವಣ್ಣ ಎಂದು ಕರೆದರು. ಒಕ್ಕಲಿಗರು ಶೀಗಿ ಹುಣ್ಣಿವೆ, ಸಂಕ್ರಮಣ ಹಾಗೂ ಭೂಮಿ ಬಿತ್ತುವಾಗ ಎಲ್ಲರೂ ಆರಾಧನೆ ಮಾಡುತ್ತಾರೆ.



**ಪುನರ್ವಸತಿ**

ನಾಡಿನ ಸಮೃದ್ಧಿಗಾಗಿ ನಿಸರ್ಗ ನದಿಗಳನ್ನು ಕೊಡಮಾಡಿದರೂ ಅವು ಎಲ್ಲ ಪ್ರದೇಶಗಳಿಗೆ ಹಸಿರಾಗಿಸುವುದಿಲ್ಲ ಹಾಗಾಗಿ ಸರಕಾರಗಳು ನೀರಾವರಿ ಯೋಜನೆಯ ಅಡಿಯಲ್ಲಿ ಆಣೆಕಟ್ಟನ್ನು ಕಟ್ಟಿದರು ಅದುವೇ ಕೃಷ್ಣಾ ಮೇಲ್ದಂಡೆ ಯೋಜನೆ. ಆಲಮಟ್ಟಿ ಆಣೆಕಟ್ಟಿನ ಹಿನ್ನೀರಿನಲ್ಲಿ ಬೀಳಗಿ ತಾಲೂಕು ತ್ಯಾಗ ಮಾಡಿ ತನ್ನ ಗುಣವನ್ನು ಮೆರೆದಿದೆ. ಅಂತೆಯೇ ತಾಲೂಕಿನ ಕೃಷ್ಣ-ಘಟಪ್ರಭಾ ನದಿಯ ದಡದಲ್ಲಿ ಸುಮಾರು ೪೫ ಹಳ್ಳಿಗಳು ಪುನರ್ ವಸತಿಯಾಗಿ ಮೂಲ ಸಂಸ್ಕೃತಿ ಪುನಾ ಸ್ಥಾಪಿಸುವಲ್ಲಿ ಸರಕಾರ ಹರಸಾಹಸ ನಡೆಸುತ್ತಿದೆ. ಆ ಹಳ್ಳಿಗಳಿಗೆ ಮೂಲ ಹೆಸರಿನ್ನಿಟ್ಟು ಅದಕ್ಕೆ ಪುನರ್ ವಸತಿ ಕೇಂದ್ರ ಎಂದು ಗುರುತಿಸಲಾಗುತ್ತದೆ.

ಉದಾ:
ಗಡದಿನ್ನಿ (ಪು.ಕೇ.) (Rehabitation Center)
ಗುಡದಿನ್ನಿ (ಪು.ಕೇ.) (Rehabitation Center)
ಢವಳೇಶ್ವರ (ಪು.ಕೇ.) (Rehabitation Center)
ಸೊನ್ನ (ಪು.ಕೇ.) (Rehabitation Center) ಇತ್ಯಾದಿ.

***

ಅಧ್ಯಾಯ ಐದು

## "ಬೀಳಗಿ ತಾಲೂಕಿನ ಸ್ಥಳನಾಮಗಳ ಭಾಷಿಕ ಸ್ವರೂಪ"

ಭಾಷಾ ವಿಜ್ಞಾನದ ದೃಷ್ಟಿಯಿಂದ ಸ್ಥಳನಾಮ ಸಂಶೋಧನೆಗೆ ಎತ್ತರದ ಸ್ಥಾನವಿದೆ. ಹೀಗೆ ಮಹತ್ತರವಾದ ಸ್ಥಾನವಿರುವ ಸ್ಥಳನಾಮಕ್ಕೂ ಮತ್ತು ಭಾಷೆಗೂ ಅವಿನಾಭಾವ ಸಂಬಂಧವಿದೆ. ಅಂತೆಯೇ 'ಭಾಷೆಯು' ಮಾನವನ ಬುದ್ದಿವಂತಿಕೆಯ ಲಕ್ಷಣವಾಗಿದೆ. ಸ್ಥಳನಾಮ ಸಂಶೋಧನೆಗೆ ತೊಡಗಿದ ಸಂಶೋಧಕನಿಗೆ ಭಾಷೆಯ ವಿವಿಧ ಮಗ್ಗುಲಗಳನ್ನು ಸ್ಪರ್ಶಿಸಿ, ಪದರು-ಪದರುಗಳನ್ನು ತೆರೆದು ನೋಡಿದಂತೆ ಕೆಲವು ಸೂಕ್ಷ್ಮ ಒಳನೋಟಗಳ ಮೂಲಕ ಮಹತ್ವದ ಮಾಹಿತಿಯನ್ನು ಒದಗಿಸುತ್ತವೆ. ಹೀಗಾಗಿ ಸ್ಥಳನಾಮ ಮತ್ತು ಭಾಷೆ ಒಂದಕ್ಕೊಂದು ನಿಕಟ ಸಂಬಂಧ ಹೊಂದಿದೆ.

'ಭಾಷೆ' ಎಂಬುದು ಮಾನವನ ಬುದ್ದಿಯ ಕೂಸು. ಭಾಷೆ ವೈವಿಧ್ಯತೆಯಿಂದ ಕೂಡಿರುವುದರಿಂದ ವಸ್ತುಗಳನ್ನು ಗುರುತಿಸಿಕೊಳ್ಳಲು ಹೆಸರು ನೀಡುವ ಪ್ರಕ್ರಿಯೆಗೆ 'ಭಾಷೆ' ಪ್ರಮುಖ ಸಾಧನವಾಗಿದೆ. ಅಂತೆಯೇ ಈ ಹೆಸರುಗಳ ಅಧ್ಯಯನ ಮಾಡುವ ಶಾಸ್ತ್ರವೇ 'ನಾಮಾಧ್ಯಯನ' ಶಾಸ್ತ್ರ (Onamastic)ವಾಗಿದೆ.

ಸ್ಥಳನಾಮಗಳ ಅಧ್ಯಯನವನ್ನು 'ಸ್ಥಳನಾಮಾಧ್ಯಯನದ ಶಾಸ್ತ್ರ (Toponomy) ಎಂದು ಕರೆಯಲಾಗಿದೆ. ಸ್ಥಳನಾಮಗಳಲ್ಲಿ "ವಿಶಿಷ್ಟ" ಮತ್ತು "ವಾರ್ಗಿಕ" ಎಂಬೆರಡು ಮುಖ್ಯ ಘಟಕಗಳಿವೆ ಇವುಗಳ ಸಹಾಯದಿಂದ ಸ್ಥಳನಾಮಗಳ ಸ್ವರೂಪವನ್ನು ತಿಳಿಯುವುದರ ಜೊತೆಗೆ ಇತರ ಭಾಷೆಗಳ ಪ್ರಭಾವ, ಪುನರ್ನಾಮಕರಣ ಸಂಸ್ಕೃತೀಕರಣ ಮುಂತಾದ ಅಂಶಗಳನ್ನು ಸ್ಥಳನಾಮಗಳಲ್ಲಿ ಆಗಿರುವ ಬದಲಾವಣೆಗಳನ್ನು ತಿಳಿಯಲು ಸಹಾಯಕಗಳಾಗಿವೆ.

ಸ್ಥಳನಾಮಗಳನ್ನು ಸಾಮಾನ್ಯವಾಗಿ ಭಾಷಿಕ ನೆಲೆಯಲ್ಲಿ ಅಧ್ಯಯನ ಮಾಡುವಾಗ ವಿವರಣಾತ್ಮಕವಾಗಿ ಸಂಧಿ, ಸಮಾಸ, ಧ್ವನಿಮಾ, ಆಕೃತಿಮಾಗಳ ನಿಯಮಗಳ ಅಡಿಯಲ್ಲಿ ನೋಡಲಾಗುತ್ತದೆ.

ಈ ಅಧ್ಯಯನಕ್ಕೆ ವರ್ಣನಾತ್ಮಕ ಅಥವಾ ವಿವರಣಾತ್ಮಕ ಅಧ್ಯಯನ ಎಂದು ಕರೆಯುತ್ತೇವೆ. 'ವಿವರಣಾತ್ಮಕ ಭಾಷಾ ವಿಜ್ಞಾನವೇ ನಿಜವಾಗಿ ಇಂದಿಗೂ ಭಾಷಾ ವಿಜ್ಞಾನದ ಬೆನ್ನೆಲುಬು. ಅಂತೆಯೇ ಇದನ್ನು ಸಾಮಾನ್ಯ ಭಾಷಾ ವಿಜ್ಞಾನಕ್ಕೆ ಸೇರಿಸಿದ್ದಾರೆ. ಆಧುನಿಕವಾಗಿ ಎಷ್ಟೇ ನವ್ಯ ಪ್ರಯೋಗಗಳನ್ನು ಮಾಡಿದರೂ ಪ್ರಮುಖ ಆಧಾರ ವರ್ಣನಾತ್ಮಕ ಭಾಷಾ ವಿಜ್ಞಾನ ಎಂದು ಡಾ. ಸೋಮಶೇಖರಗೌಡ (೨೦೦೦) ಹೇಳುವ ಮಾತು ಸತ್ಯ.

ಭಾಷಾ ವಿಜ್ಞಾನ ಮತ್ತು ಸ್ಥಳನಾಮಗಳ ಶಾಸ್ತ್ರೀಯ ಅಧ್ಯಯನದಿಂದ ಭಾಷೆಯ ಅವಸ್ಥಾಂತರ ಅರಿಯಬಹುದು ಅಂತೆಯೇ ಬಳಕೆಯಲ್ಲಿರುವ ಸ್ಥಳನಾಮಗಳಿಗೆ ಅರ್ಥ ಹೊಳೆಯದಿದ್ದಾಗ ಸ್ಥಳನಾಮ ಅಧ್ಯಯನದಲ್ಲಿ ಪರಿಹಾರ ಸಿಗುತ್ತದೆ.

ಬೀಳಗಿ ತಾಲೂಕಿನಲ್ಲಿ ಏಕಭಾಷಿಕ ಜನಾಂಗವನ್ನು ಹೊಂದಿದೆ. ಸಮಾಜ ಬದಲಾದಂತೆ ಸಂಸ್ಕೃತಿ ಬದಲಾಗುತ್ತದೆ. ಸಂಸ್ಕೃತಿ ಬದಲಾದಂತೆ ಭಾಷೆಯು ಬದಲಾಗುತ್ತವೆ. ಸುಮಾರು ೬೫ ಗ್ರಾಮನಾಮ

ಹೊಂದಿರುವ ಈ ತಾಲೂಕು ಹಳ್ಳಿಗಳಿಂದ ಹಳ್ಳಿಗಳಾಗಿರು ನಾಮಗಳಲ್ಲಿ ವೈವಿಧ್ಯತೆಯನ್ನು ಕಾಣಸಿಗುತ್ತವೆ. ಇಲ್ಲಿ ಒಂದೇ ವಾರ್ಗಿಕವಿರುವ ಗ್ರಾಮಗಳಲ್ಲಿ ಹಲವಾರು ವಿಶೇಷ ವಾರ್ಗಿಕಗಳು ಇಲ್ಲಿ ಬಳಕೆಯಾಗಿವೆ.

**೧. ಸ್ಥಳನಾಮಗಳ ವಾರ್ಗಿಕಗಳ ಪಟ್ಟಿ**

ಬೀಳಗಿ ತಾಲೂಕಿನಲ್ಲಿ ಬರುವ ಸ್ಥಳನಾಮಗಳ ಉತ್ತರ ಪದದಲ್ಲಿರುವ ವಾರ್ಗಿಕಗಳ ರಚನೆ ಹಾಗೂ ಸಂಕ್ಷಿಪ್ತ ವಿವರಣೆಯನ್ನು ಇಲ್ಲಿ ಕೊಡಲಾಗಿದೆ.

ಊರು:- ಇದು ಅಚ್ಚ ದ್ರಾವಿಡ ಪದ, ವಾಸಸ್ಥಳವನ್ನು, ಸೂಚಿಸುತ್ತದೆ

ನಾಡು, ಗ್ರಾಮ, ಸಣ್ಣ ಪಟ್ಟಣ (ಸಿ.ಅ. ಪು-೬೮)

**ಊರು:** ಕೊನೆಯಲ್ಲಿ ಬರುವ ಕೆಲವು ಹೆಸರುಗಳಾದರೂ ಮೂಲತಃ ಪುರದಿಂದ ಕೊನೆಯಾಗುತ್ತಿದ್ದವೆಂಬ ಶಾಸನಾಧಾರಗಳಿವೆ (ವಾಗರ್ಥ-೧೫)

ಇದು ದ್ರಾವಿಡ ಪದವಾದ್ದರಿಂದ ತೆಲುಗಿನಲ್ಲೂ ಈ ವಾರ್ಗಿಕ ಬಳಕೆಯಲ್ಲಿದೆ.

ಉದಾ: ಕೊಲೂರು
ಮುಂಡಗನೂರು
ಬಳ್ಳೂರು
ವರಾನಗೂರು
ಹೆಗ್ಗೂರು

ಕಲ್ಲು:ಕಲ್ಲ

ನಿಸರ್ಗವಾಚಿ ಪದ, ಬಂಡೆ, ಶಿಲೆ(ಕ.ರ.ಕೋ. ಪು-೪೬)

ಇದು ನಿರ್ದಿಷ್ಟ ಮತ್ತು ವಾರ್ಗಿಕವಾಗಿ ಬಳಕೆಯಾಗುವ ಶಿಲಾವಾಚಿ ಘಟಕವಾಗಿದೆ. 'ಕಲ್' ಎಂಬ ರೂಪಗಳಲ್ಲಿ ವ್ಯಂಜನಾಂತ ಪದವಾಗಿಯೂ, ಕ>ಗ ಆಗಿರುವುದರಿಂದ ಕಲ್ಲ>ಗಲ್ಲ ಎಂದು ಬಳಕೆಯಲ್ಲಿದೆ.

ಉದಾ: ಹೆರಕಲ್ಲ

ಕಂದಗಲ್ಲ

ಕೇರಿ>ಕೆರಿ:

ಕೆರೆ ಎಂದರೆ ಜಲವಾಚಿ ಪದ, ಕೊಳ ಜಲಾಶಯ (ಸಿ.ಅ. ಪು-೧೩೨) ಏರಿ ಹಾಕಿ ನೀರು ನಿಲ್ಲಿಸಿದ ಸ್ಥಳ (ಕ.ಕ.ಇ.ನಿ. ಪು-೧೯೭) ಕೆರೆ ಗೆರೆ, ಕೇರಿ/ಗೇರಿ ಯಾಗಿಯೂ ಬಳಕೆಯಾಗಿದೆ (ಕ>ಗ)ಕೆರೆಗೆ ಒಮ್ಮೊಮ್ಮೆ 'ಸಾಗರ' ಎಂದು ಉತ್ಪ್ರೇಕ್ಷೆಯಿಂದಲೂ ಬಳಸಲಾಗಿದೆ.

ಉದಾ: ಮನ್ನಿಕೇರಿ. ಅರಕೇರಿ.

ಕೊಪ್ಪ:

ವಾಸ್ತವ್ಯವಾಚಿ ಹಲವಾರು ಜನರು ಗುಂಪಾಗಿ ವಾಸಿಸುವ ಕೇರಿ ಅಥವಾ ಸಣ್ಣಹಳ್ಳಿ, ಕೊಪ್ಪಲು-ರಾತ್ರಿವೇಳೆ ಸಾಕು ಪ್ರಾಣಿಗಳನ್ನು ಕೂಡಿಹಾಕುವ ಸ್ಥಳವಾಗಿದೆ.

ಉದಾ: ಚಿನಿವಾಲರ ಕೊಪ್ಪ

ಕೊಪ್ಪ

ಗಾವ್, ಗಾವಿ:

ಗಾವ್ ಎನ್ನುವುದು ಮರಾಠಿ ವಾರ್ಗಿಕ. ಈ ಪ್ರದೇಶವು ಮುಂಬೈ ಕರ್ನಾಟಕ ಪ್ರದೇಶವಾದ್ದರಿಂದ ಮರಾಠಿಗರ ಪದಗಳು ಕನ್ನಡದ ಮೇಲೆ ಪ್ರಭಾವ ಬೀರಿವೆ. ಗಾವ್ ಎಂದರೆ ಹಳ್ಳಿ ಎಂದರ್ಥ.

ಉದಾ: ಗಿರಿಗಾವ್>ಗಿರಿಗಾವಿ

ಗುಂಡಿ:

ಜಲವಾಚಿ ಪದ (ವಾಗರ್ಥ-ಪು-೭) ಮಣ್ಣನ್ನು ತೆಗೆದು ಹಳ್ಳವಾಗಿರುವ ಪ್ರದೇಶ ತಗ್ಗು ಪ್ರದೇಶವನ್ನು ಗುಂಡಿ ಎನ್ನುವರು.

ಉದಾ: ಆಲಗುಂಡಿ

ಗುಪ್ಪಿ:

ಕುಪ್ಪೆ>ರಾಶಿ ಎಂದರ್ಥ ಸೂಚಿಸುವ ವಾರ್ಗಿಕವು (ಸಂಕ. ನಿ. ಪು-೩೮೭)

ಉದಾ: ಶಿರಗುಪ್ಪಿ

**ಝರಿ>ಜರಿ:** ಜಲವಾಚಿ ಪದ ಬೆಟ್ಟದಿಂದ ಹರಿದುಬರುವ ಪ್ರವಾಹ (ಸಂ.ಕ.ನಿ ಪು-೪೯೦) ಝರಿ>ಜರಿ ಎಂದು ಬಳಕೆಯಲ್ಲಿದೆ

ಉದಾ: ಅಮಲಝರಿ

**ದಿಣ್ಣೆ/ದಿನ್ನೆ/ದಿನ್ನಿ:** ಭೌಗೋಳಿಕ ಲಕ್ಷಣ ಸೂಚಿಪದ; ದಿಬ್ಬ, ತಿಟ್ಟ, ಎತ್ತರಗುಡ್ಡ ಮುಂತಾದ ಅರ್ಥನೀಡುವ ವಾರ್ಗಿಕ ಪದ ದಿಣ್ಣೆ>ದಿನ್ನೆ>ದಿನ್ನಿ ಬಳಕೆಯಲ್ಲಿದೆ.

ಉದಾ: ಮುತ್ತಲದಿನ್ನಿ
ಗಡದಿನ್ನಿ
ಗುಡದಿನ್ನಿ
ಬಾದರದಿನ್ನಿ
ಮುತ್ತಲದಿನ್ನಿ
ಗೋವಿನದಿನ್ನಿ

**ಪಳ್ಳಿ>ಹಳ್ಳಿ:** ವಾಸ್ತವ್ಯವಾಚಿ ಜನರ ವಾಸಸ್ಥಳವಾಗಿದೆ. ಚಿಕ್ಕ ಊರು/ಗ್ರಾಮ ಎಂದು ಸೂಚಿಸುತ್ತದೆ. ಪಳ್ಳಿ> ಹಳ್ಳಿ ಬದಲಾವಣೆಯಾಗಿ ಬಳಕೆಯಲ್ಲಿದೆ

ಉದಾ: ಕೋವಳ್ಳಿ
ಯಡಹಳ್ಳಿ

**ಪಲ್ಲೆ:** ವಾಸ್ತವ್ಯ ವಾಚಿಪದ, ಪಲ್ಲೆ ಎಂದರೆ ಹಳ್ಳಿ ಇದು ತೆಲುಗು ವಾರ್ಗಿಕ.

ಉದಾ : ಗುಂಡನ ಪಲ್ಲೆ.

**ಪುರ ; ಪೂರ :** ವಾಸ್ತವ್ಯವಾಚಿ ಪದ – ಸಂಸ್ಕೃತಪದ, ಪಟ್ಟಣ, ಮನೆ ನಗರ ನದಿ ಕಾಲುವೆ (ಸಿ.ಅ.ಪು–೩೪೦) ವಾಗರ್ಥ–(ಪು ೧೬)ದಲ್ಲಿ ಹೇಳುವಂತೆ; ಆವರ – ವರ – ವಾರ – ಪೂರ ಎಂಬ ವಾರ್ಗಿಕಗಳು ಬಳಕೆಯಲ್ಲಿವೆ.

ಉದಾ : ಚೌಡಾಪೂರ.
ಲಿಂಗಾಪುರ
ಶಿವಾಪುರ

ಮಟ್ಟಿ : ನಿಸರ್ಗವಾಚಿ ಊರಿನ ಗಿಡಯಲ್ಲಿ ಹಬ್ಬಿರುವ ಗುಡ್ಡಗಳ ಸಾಲನ್ನು ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ, ಗುಡ್ಡದಲ್ಲಿ ಜನರಿಗೆ ಬೇಕಾಗುವ ಕಟ್ಟಿಗೆ, ಹಣ್ಣು ಜೇನು, ವಿಪುಲವಾಗಿ ದೊರೆಯುತ್ತಿರುವುದರಿಂದ ಗುಡ್ಡಗಳ ಜೊತೆ ನಿಕಟ ಸಂಬಂಧ ಹೊಂದಿರುತ್ತಾರೆ ಇವುಗಳಿಗೆ "ಮಟ್ಟಿ" ಎಂದು ಕರೆಯುವರು.

ಉದಾ : ಜಾನಮಟ್ಟಿ, ತೋಳಮಟ್ಟಿ, ತುಮ್ಮರ ಮಟ್ಟಿ

ಸಾಗರ : ಜಲವಾಚಿ-ಕಡಲು, ಸಮುದ್ರ ಆದರೆ ಇಲ್ಲಿ ದೊಡ್ಡ ಕೆರೆಗೆ ಸಾಗರ ಎಂದು ಉತ್ಪ್ರೇಕ್ಷಿತ ಪದ ಬಳಸಿದ್ದಾರೆ.

ಉದಾ : ಗಿರಿಸಾಗರ.

ಹಟ್ಟಿ : ವಾಸ್ತವ್ಯವಾಚಿ ಪದ; ಅರಂಭಕಾಲದ ಮಾನವನ ನೆಲೆಯಾಗಿದೆ (ಎ.ಹೆ.ಕಂ) ದನದಕೊಟ್ಟಿಗೆ, ದೊಡ್ಡಿ ಹಟ್ಟಿಗಳು - ಪಶು ಸಾಕಾಣಿಕೆಯ ವೃತ್ತಿ ಸೂಚಕ ಪದ ಪಟ್ಟಿ > ಹಟ್ಟಿಯು ಅಗಿರಬಹುದು

ಉದಾ : ಯತ್ನಟ್ಟಿ (ಹಟ್ಟಿ)
ಕಡಪಟ್ಟಿ (ಪಟ್ಟಿ)

ವಾಡಿ: ವಾಡ - ವಾಡಿ - ವಾಡ್ - ವಾಡೆ ಆಪಾರ, ಚಿಕ್ಕಕಾಡು ಹಾಡಿ ಊರಿನ ಒಂದು ಭಾಗ (ಸಿ-ಅ-೪೩೫) ತೆಲುಗಿನಲ್ಲಿ - ವಾಡಿ ಎಂಬ ವಾರ್ಗಿಕವಿದೆ.

ಉದಾ : ಆನಗವಾಡಿ.

ಹಾಳ್>ಹಾಳ: ಜಲವಾಚಿ ಪದ - ನಾಲ್ಕು ಬುದುಗಳನ್ನೊಳಗೊಂಡ ತುಂಡು ಭೂಮಿಗೆ ಹಾಳೆ>ಹಾಳಿ ಎಂದು ಕರೆಯುತ್ತಾರೆ. ; ನೀರು ಕಟ್ಟಲು ಚೌಕಾಕಾರದ ಕಟ್ಟೆಯನ್ನು ಕಟ್ಟಿರುತ್ತಾರೆ (ಕ.ಭಾ ಸಂ.೧೯೮೬)

ಉದಾ : ನಾಗರಾಳ
ಹದ್ರ್ಯಾಳ
ಹಂಚಿನಹಾಳ
ಗೋಡಿಹಾಳ
ಬೂದಿಹಾಳ ಹೊನ್ನಾಳ
ಬಿಸನಾಳ ಕಮದಾಳ

೨) ಸಂಕೀರ್ಣ ವಾರ್ಗಿಕಗಳು.

ಸ್ಥಳನಾಮದ ಉತ್ತರಪದವಾದ ಎಲ್ಲಾ ವಾರ್ಗಿಕ ಪದ ರಚನೆಗಳಿಗೆ ಅರ್ಥ ಅಸ್ಪಷ್ಟ ಆಮಗಳ ನಿಪತ್ತಿ ಅರ್ಥಗಳನ್ನು ನಿರ್ಧರಿಸುವುದು ಕಷ್ಟಕರವಾಗಿದೆ. ಭಾಷಿಕ ಘಟಕಗಳಿಗೆ ಕಾಲಂತರದಲ್ಲಿ ಈ ಬಗೆಯ ಪದಗಳು ಸವಕಳಿಯಾಗುತ್ತಿವೆ.

ಕಿ : ಉದಾ : ಕಾತರಕಿ

ಗಿ : ಕುಂದರಗಿ

ರ್ತಿ : ಕೊರ್ತಿ

೩) ಸ್ಥಳನಾಮಗಳಲ್ಲಿ ಪೂರ್ವಪದವು ವಾಗಿಯುಕವಾಗಿ ಸ್ಥಳನಾಮಗಾಳಲ್ಲಿ ವಾರ್ಗಿಕವಾಗಿ ಬಳಕೆಯಾಗುವ ಅಕೃತಿಮಾಗಳು ಕೆಲವೊಮ್ಮೆ ನಿರ್ಧಿಷ್ಟವಾಗಿ ಬಳಕೆಯಾಗಿರುವುದು.

ಉದಾ :

೧) ಗಿರಿ+ಸಾಗರ > ಗಿರಿಸಾಗರ ಗಿರಿ ಎನ್ನುವುದು ಸಾಮಾನ್ಯಂಶ(ವಾರ್ಗಿಕ)

೨) ಗಿರಿ+ಗಾಂವ್>ಗಿರಿಗಾಂವ್

೩) ಗುಡ+ದಿನ್ನಿ>ಗುಡ್ಡ+ದಿನ್ನಿ<ಗುಡದಿನ್ನಿ

೪) ಗಡದಿನ್ನಿ ; ಗಡ ಎಂದರೆ ಕೋಟೆ

ಗಡ+ದಿನ್ನಿ > ಗಡದಿನ್ನಿ

೪) ಸ್ಥಳನಾಮಗಳು ಮತ್ತು ಘಟಕಗಳು

ಅರ್ಥ ನೀಡುವ ಸಣ್ಣ ಧ್ವನಿ ಸಮೂಹ ಬೇಕೆಂಬ ನಿಯಮವೇನಿಲ್ಲ. ಕೆಲವು ಒಂದು ಘಟಕ, ಕೆಲವು ಎರಡು ಘಟಕವನ್ನು ಕೆಲವು ಎರಡಕ್ಕಿಂತ ಹೆಚ್ಚು ಘಟಕಗಳು ವಾರ್ಗಿಕವಾಗಿ ಸ್ಥಳನಾಮಗಳಲ್ಲಿ ಬಳಕೆಯಾಗಿವೆ, ಇವು ಸ್ಥಳದಿಂಧ ಸ್ಥಳಕ್ಕೆ ಬದಲಾಗುವುವು, ಸ್ಥಳನಾಮಗಳಲ್ಲಿ ಆಕೃತಿಮಾಗಳ ಬಳಕೆಗನುಗುಣವಾಗಿ ಮೂರು ವಿಭಾಗಳಾಗಿ ಆಧ್ಯಯನದ ದೃಷ್ಠಿಯಿಂದ ವಿಂಗಡಿಸಲಾಗಿದೆ.

೧) ಒಂದು ಅಕೃತಿಮಾ ಹೊಂದಿರುವ ಸ್ಥಳನಾಮಗಳು.

೨) ಎರಡು ಅಕೃತಿಮಾ ಹೊಂದಿರುವ ಸ್ಥಳನಾಮಗಳು.

೩) ಎರಡಕ್ಕಿಂತ ಹೆಚ್ಚು ಅಕೃತಿಮಾ ಹೊಂದಿರುವ ಸ್ಥಳನಾಮಗಳು.

೧) ಒಂದು ಅಕೃತಿಮಾ ಹೊಂದಿರುವ ಸ್ಥಳನಾಮಗಳು.

ಸ್ಥಳನಾಮಗಳು ಸಾಮಾನ್ಯವಾಗಿ ವಿಶಿಷ್ಟ ಮತ್ತು ವಾರ್ಗಿಕಗಳನ್ನು ಹೊಂದಿದ್ದರೂ ಕೆಲವು ಸ್ಥಳನಾಮಗಳಲ್ಲಿ ಕೇವಲ ವಿಶಿಷ್ಟ ಮಾತ್ರ ಇರಬಹುದು. ಅಂತೆಯೇ ಕೆಲವು ಸಂದರ್ಭಗಳಲ್ಲಿ

ವಾರ್ಗಿಕವೇ ವಿಶಿಷ್ಟವಾಗಿಯೂ ಕೆಲಸ ಮಾಡುತ್ತದೆ. ಈ ರೀತಿಯ ವಿಶಿಷ್ಟ ಅಥವಾ ವಾರ್ಗಿಕವನ್ನು ಮಾತ್ರ ಹೊಂದಿರುವ ಸ್ಥಳನಾಮಗಳು ಒಂದು ಆಕೃತಿಮಾನನ್ನು ಮಾತ್ರ ಹೊಂದಿರುತ್ತವೆ.

೧. ಕೊಪ್ಪ

೨. ಕೊರ್ತಿ

೩. ತೆಗ್ಗಿ

೪. ರೊಳ್ಳಿ

೫. ಸಂಗಮ

೬. ಸುನಗ

೭. ಸೊನ್ನ

**೨) ಎರಡು ಅಕೃತಿಮಾಗಳನ್ನೊಂಡ ಸ್ಥಳನಾಮಗಳು.**

ಸ್ಥಳನಾಮಗಳಲ್ಲಿ "ವಿಶಿಷ್ಟ" 'ವಾರ್ಗಿಕ' ಹೊಂದಿರುವಿಕೆ ಸಾಮಾನ್ಯವಾಗಿದೆ. ವಿಶಿಷ್ಟವು ಆ ಸ್ಥಳದ ವಿಶೇಷತೆಯನ್ನು ಭೂಗುಣವನ್ನು, ವ್ಯಕ್ತಿಯನ್ನು, ವೃತ್ತಿಯನ್ನು ಸಾಮಾಜಿಕ ಮತ್ತು ಸಾಂಸ್ಕೃತಿಕ ಮುಂತಾದ ಅಂಶಗಳನ್ನು ಸೂಚಿಸುತ್ತದೆ. ಇವುಗಳ ಸ್ಥಳನಾಮದ ಮೂಲ ಅಂಶವಾಗಿದ್ದು, ಪೂರ್ವ ಪದದಲ್ಲಿ ಈ ವಿಶಿಷ್ಟಾಂಶವನ್ನು ಉತ್ತರ ಪದದಲ್ಲಿ ಸಾಮಾನ್ಯ ವಾರ್ಗಿಕವನ್ನು ಗುರುತಿಸಬಹುದು. ಒಂದು ಆಕೃತಿಮಾದಲ್ಲಿ ವಾರ್ಗಿಕವನ್ನು ಗುರುತಿಸಲು ಸಾಧ್ಯವಿಲ್ಲವಾದರೂ, ಎರಡು ಆಕೃತಿಮಾದಲ್ಲಿ ಇದು ಸಾಧ್ಯವಾಗುತ್ತದೆ.

ಉದಾ:

| | |
|---|---|
| ಅರ+ಕೇರಿ =ಅರಕೇರಿ | ಬಾದರ+ದಿನ್ನಿ>ಬಾದರದಿನ್ನಿ |
| ಆಲ+ಗುಂಡಿ>ಆಲಗುಂಡಿ | ಬೂದಿ+ಹಾಳ>ಬೂದಿಹಾಳ |
| ಕಂದ+ಕಲ್ಲು>ಕಂದಗಲ್ಲು | ಮಾನಗ+ಊರು>ಮಾನಗೂರು |
| ಕೊಂತಿ+ಕಲ್ಲ>ಕೊಂತಿಕಲ್ಲ | ಮುತ್ತಲ+ದಿನ್ನಿ>ಮುತ್ತಲದಿನ್ನಿ |
| ಗರಡ+ದಿನ್ನಿ>ಗರಡದಿನ್ನಿ | ಲಿಂಗ+ಪುರ>ಲಿಂಗಾಪುರ |
| ಗಿರಿ+ಸಾಗರ>ಗಿರಿಸಾಗರ | ಶಿರ+ಗುಪ್ಪಿ>ಶಿರಗುಪ್ಪಿ |
| ಚೌಡ+ಪುರ>ಚೌಡಾಪುರ | ಶಿವ+ಪುರ>ಶಿವಾಪುರ |
| ಜಾಣ+ಮಟ್ಟಿ>ಜಾನಮಟ್ಟಿ | ಹಂಚಿನ+ಹಾಳ>ಹಂಚಿನಾಳ |
| ನಾಗರ+ಹಾಳ>ನಾಗರಾಳ | ಹೆರ+ಕಲ್ಲ>ಹೆರಕಲ್ಲ |
| ಬಾಡ+ಗಂಡಿ>ಬಾಡಗಂಡಿ | ಹೊನ್ನಿ+ಹಾಳ>ಹೊನ್ನಿಹಾಳ |

**೩) ಎರಡಕ್ಕಿಂತ ಹೆಚ್ಚು ಆಕೃತಿಮಾಗಳಿರುವ ಸ್ಥಳನಾಮಗಳು**

ಸ್ಥಳನಾಮ ರಚನೆಯಲ್ಲಿ ಆಕೃತಿಮಾಗಳು ಇಷ್ಟೇ ಇರಬೇಕೆಂದು ನಿರ್ಬಂಧವಿಲ್ಲ, ಆದುದರಿಂದ ಕೆಲವೊಮ್ಮೆ ಹಲವಾರು ಆಕೃತಿಮಾಗಳು ಸೇರಿ ಸ್ಥಳನಾಮಗಳುಂಟಾಗುತ್ತವೆ. ಅಂತೆಯೇ ಮಾನವನ ನಾಗರಿಕತೆ ಬೆಳೆದಂತೆ ಗ್ರಾಮಗಳು ಬೆಳೆಯುತ್ತವೆ, ಗ್ರಾಮಗಳು ಬೆಳೆದಂತೆ ನಾಮಗಳು ವಿಸ್ತೃತವಾಗುತ್ತವೆ.

ಸ್ಥಳನಾಮಗಳ ಬೆಳವಣಿಗೆಗೆ ಜನಸಂಖ್ಯಾ ಅಧಿಕತೆ, ವಲಸೆ, ಜ್ಞಾನದ ವೈಶಾಲ್ಯತೆ, ಭೌಗೋಳಿಕ ಅರಿವು, ಭಾಷೆಯಲ್ಲಿ ಹೊಸ ಆವಿಷ್ಕಾರಗಳು ಕಾರಣವಾಗಿರಬಹುದು.

ಸಾಮಾನ್ಯವಾಗಿ ಎರಡು ಸ್ಥಳನಾಮಗಳು ಒಂದೇ ಇದ್ದಾಗ ವಿಶೇಷಣಗಳಿಂದ ಗುರುತಿಸಲಾಗುತ್ತದೆ. ಅವು ದೈವವಾಚಿ, ನಿಸರ್ಗವಾಚಿ ಪರಿಮಾಣವಾಚಕ ಸೇರಿ ಬಹು ಆಕೃತಿಮಾಗಳ ಬಳಕೆ ಹೆಚ್ಚಾಗಿರುತ್ತದೆ.

ಉದಾ: ಚಿಕ್ಕ+ಆಲ+ಗುಂಡಿ=ಚಿಕ್ಕಾಲಗುಂಡಿ

ಹಿರೇ+ಬೂದಿ+ಹಾಳ=ಹಿರೇಬೂದಿಹಾಳ

ಚಿಕ್ಕ+ಬೂದಿ+ಹಾಳ=ಚಿಕ್ಕಬೂದಿಹಾಳ

ಚಿಕ್ಕ+ಹಂಚಿನ+ಹಾಳ=ಚಿಕ್ಕಹಂಚಿನಾಳ ವಾರ್ಗಿಕವೇ ನಿರ್ದಿಷ್ಟವಾಗಿ ಬಳಕೆಯಾಗಿವೆ.

ಸ್ಥಳನಾಮಗಳಲ್ಲಿ ಸಾಮಾನ್ಯಾಂಶ ಮತ್ತು ನಿರ್ದಿಷ್ಟಗಳೆಂಬ ಘಟಕಗಳಿರುತ್ತವೆ ಆದರೆ ಕೆಲವು ಸ್ಥಳನಾಮಗಳಲ್ಲಿ ಎರಡು ವಾರ್ಗಿಕಗಳು ಸೇರಿ ಸ್ಥಳನಾಮವಾಗುತ್ತವೆ, ನಾಮದ ವಾರ್ಗಿಕ ಪದವು ಪೂರ್ವಪದದಲ್ಲಿ ನಿರ್ದಿಷ್ಟವಾಗಿ ಬಳಕೆಯಾಗಿರುತ್ತದೆ. ಇಂತಹ ಸಂದರ್ಭದಲ್ಲಿ ವಾರ್ಗಿಕವು ಸ್ವತಂತ್ರ ಆಕೃತಿಮಾಗಳ ಕಾರ್ಯ ನಿರ್ವಹಿಸುತ್ತದೆ. ಹೀಗೆ ಆ ಊರಿನ ಪರಿಸರವನ್ನನುಸರಿಸಿ ಬಳಕೆಯಾಗುತ್ತವೆ.

ಗುಡ್ಡ+ದಿನ್ನಿ>ಗುಡ್ಡದಿನ್ನಿ>ಗುಡದಿನ್ನಿ

ಗಿರಿ+ಗಾಂವ>ಗಿರಿಗಾಂವ>ಗಿರಿಗಾವಿ

ಗಿರಿ+ಸಾಗರ>ಗಿರಿಸಾಗರ

ಆಲ+ಗುಂಡಿ>ಆಲಗುಂಡಿ

**೫. ಬರಹ ಮತ್ತು ಜನ ಸಾಮಾನ್ಯರ ವಿಚಾರಣೆ**

ಭಾರತದಲ್ಲಿ ಆಂಗ್ಲರ ಆಡಳಿತದ ದೇಶೀ ಹೆಸರುಗಳನ್ನು ತಮ್ಮ ಭಾಷೆಗೆ ಅನುಗುಣವಾಗಿ ಬರೆಯಲು ಮತ್ತು ಉಚ್ಚರಿಸಲು ತೊಡಗಿದ ಕಾರಣ ಹಲವು ಸ್ಥಳನಾಮಗಳಲ್ಲಿ ಬದಲಾವಣೆ ಉಂಟಾಗಿ ಅವು ಹಾಗೆಯೇ ಬಳಕೆಯಲ್ಲಿ ಬಂದು ಇಂದಿಗೂ ಉಳಿದುಕೊಂಡಿವೆ. ಅಷ್ಟೇ ಅಲ್ಲದೆ ಸ್ಥಳೀಯ ಜನರೂ ಸಹ ಸ್ಥಳನಾಮಗಳನ್ನು ಸೌಲಭ್ಯಕಾಂಕ್ಷೆಯಿಂದ ಹ್ರಸ್ವಗೊಳಿಸಿ ಉಚ್ಚರಿಸುವುದೂ

ಉಂಟು. ಈ ಉಚ್ಚಾರಣೆಯು ಅಕ್ಷರಸ್ಥ ಹಾಗೂ ಅನಕ್ಷರಸ್ಥರ ನಡುವೆ ವ್ಯತ್ಯಾಸವನ್ನು ಹೊಂದಿರುತ್ತದೆ. ಇವೆಲ್ಲ ಸೌಲಭ್ಯಕಾಂಕ್ಷೆ ಮತ್ತು ಮಿತವ್ಯಯದ ಕಾರಣದಿಂದಾಗಿ ಕರೆಯಲ್ಪಡುತ್ತವೆ.

ಪ್ರಸ್ತುತ ವಿಷಯದ ವ್ಯಾಪ್ತಿಯಲ್ಲಿ ಅಧ್ಯಯನ ಮಾಡುವಾಗ ದೊರೆತ ಮಾಹಿತಿಗಳ ಪ್ರಕಾರ ಈ ಕೆಳಗಿನಂತೆ ಗುರುತಿಸಲಾಗಿದೆ.

| ಶಿಷ್ಟರೂಪ | ಅಕ್ಷರಸ್ಥರ ಉಚ್ಚಾರಣೆ | ಅನಕ್ಷರಸ್ಥರ ಉಚ್ಚಾರಣೆ |
|---|---|---|
| ಅನಗವಾಡಿ | ಅನಗ್ವಾಡಿ | ಅನಗೋಡಿ |
| ಅಮಲಝುರಿ | ಅಂಬಲಝುರಿ | ಅಂಬಲಜೇರಿ |
| ಕಂದಗಲ್ಲ | ಕಂದಗಲ್ | ಕಂದ್ಗಲ್ |
| ಕಾತರಕಿ | ಕಾತರಕಿ | ಕಾತರ್ಕಿ |
| ಕುಂದರಗಿ | ಕುಂದರಗಿ | ಕುಂದರ್ಗಿ |
| ಕೊಪ್ಪ | ಕೊಪ್ | ಕ್ವಾಪ್ |
| ಕೋರ್ತಿ | ಕೊರ್ತಿ | ಕ್ವಾರ್ತಿ |
| ಕೋವಳ್ಳಿ | ಕೊವಳ್ಳಿ | ಕುವಳ್ಳಿ |
| ಗರಡದಿನ್ನಿ | ಗಡದನ್ನಿ | ಗಡದಿನ್ನಿ |
| ಗುಂಡನಪಲ್ಲೆ | ಗುಂಡಪಲ್ಲಿ | ಗುಂಡಂಪಲ್ಲಿ |
| ಗೋವಿನದಿನ್ನಿ | ಗೋವಿಂದಿನ್ನಿ | ಗ್ವಾಯಿಂದಿನ್ನಿ |
| ಚೌಡಾಪುರ | ಚವಡಾಪುರ | ಚೊಡಾಪುರ |
| ಜಾನಮಟ್ಟಿ | ಜಾನಮಟ್ಟಿ | ಜಾಮಟ್ಟಿ |
| ತುಮ್ಮರಮಟ್ಟಿ | ತುಂಬರಮಟ್ಟಿ | ತುಂಬರಮಟ್ಟಿ |
| ತೋಳಮಟ್ಟಿ | ತೊಳಮಟ್ಟಿ | ತ್ವಾಳಮಟ್ಟಿ |
| ಢಮಳೇಶ್ವರ | ಡಮಳೇಶ್ವರ | ಡೊಳ್ಳೆಸೂರ |
| ಬಾಡಗಿ | ಬಾಡಗಿ | ಬಾಡಿಗ್ಗಿ |
| ಬಾವಲತ್ತಿ | ಬಾವಲತ್ತಿ | ಬಾಲತ್ತಿ |
| ಬೀರಕಬ್ಬಿ | ಬೀರಕಬ್ಬಿ | ಬಿರ್ಕಬ್ಬಿ |

| | | |
|---|---|---|
| ಬೂದಿಹಾಳ | ಬೂದಿಹಾಳ | ಬೂದ್ಯಾಳ |
| ಯಡಹಳ್ಳಿ | ಯಡ್ಡಳ್ಳಿ | ಯಡ್ಡೊಳ್ಳಿ |
| ಚಿಕ್ಕಸಂಗಮ | ಚಿಕ್ಕಸಂಗಮ | ಚಿಕ್ಸಂಗ್ಮ |
| ಹದ್ರಿಹಾಳ | ಹದರ್‍ಯಾಳ | ಹದ್ರ್ಯಾಳ |
| ಹೆಗ್ಗೂರು | ಹೆಗ್ಗೂರ | ಹೆಗ್ಗೂರ್ |
| ಹೆರಕಲ್ಲ | ಹೆರಕಲ್ | ಹೆರ್ಕಲ್ |
| ಹೊನ್ನಿಹಾಳ | ಹೊನ್ಯಾಳ | ಹೊನ್ಯಾಳ |

೬. ಪೂರ್ವಪದ: ಸ್ವರವು ವ್ಯಂಜನವಾಗಿದ್ದಾಗ

ಎ>ಯ

ಎರಡ+ಹಳ್ಳಿ>ಎರಡಳ್ಳಿ>ಯಳಹಳ್ಳಿ

ಎಳ್ಳಿ+ಗುತ್ತಿ>ಎಳ್ಳಿಗುತ್ತಿ>ಯಳ್ಳಿಗುತ್ತಿ

೭. ಸ್ವರಾಂತ್ಯ ಸ್ಥಳನಾಮಗಳು ಉಚ್ಚಾರಣೆಯಲ್ಲಿ ವ್ಯಂಜನಾಂತವಾಗುವುದು

ಸ್ವರಾಂತ್ಯವು ಕನ್ನಡ ಪದ ರಚನೆಯ ನಿಯಮವಾಗಿದೆ ಆದರೆ ಜನಬಳಕೆಯಲ್ಲಿ ವ್ಯಂಜನಾಂತ್ಯವಾಗುತ್ತದೆ, ಹೀಗಾಗುವುದಕ್ಕೆ ಮುಖ್ಯಕಾರಣ ಸೌಲಭ್ಯಾಕಾಂಕ್ಷೆ, ಆದರೆ ಎಲ್ಲ ವಾರ್ಗಿಕಗಳು ವ್ಯಂಜನಾಂತ್ಯವಾಗುವುದಿಲ್ಲ. ಯಾವ ಸ್ಥಳನಾಮಗಳು "ಉ,ಅ,ಎ" ಸ್ವರಾಂತ್ಯವಾಗುವ ವಾರ್ಗಿಕಗಳು ಮಾತ್ರ ವ್ಯಂಜನಾಂತ್ಯವಾಗುತ್ತವೆ.

ಉದಾ: ಹೆಗ್ಗೂರು>ಹೆಗ್ಗೂರ್ (ಉ+ ್)

ಕೋಲೂರು>ಕೋಲೂರ್ (ಉ+ ್)

ಹೆರಕಲ್ಲ>ಹೆರಕಲ್ (ಅ+ ್)

ಕಂದಗಲ್ಲ>ಕಂದಗಲ್ (ಅ+ ್)

೮. ಮಹಾಪ್ರಾಣ ಅಕ್ಷರಗಳಿರುವ ಸ್ಥಳನಾಮಗಳು

ಈ ತಾಲೂಕಿನಲ್ಲಿ ಕೇವಲ ಎರಡೇ ಸ್ಥಳನಾಮಗಳು ಮಹಾಪ್ರಾಣಾಕ್ಷರಗಳಿಂದ ಕೂಡಿರುವುದನ್ನು ಕಾಣಬಹುದು.

| ಮಹಾಪ್ರಾಣಗಳ್ಳುಳ ಸ್ಥಳನಾಮ | ಬಳಕೆಯಲ್ಲಿರುವ ಸ್ಥಳನಾಮ |
|---|---|
| ಅಮಲಝರಿ (ಝ>ಜ) | ಅಂಬಲಜರಿ |
| ಢವಳೇಶ್ವರ (ಢ>ಡ) | ಡವಳೇಶ್ವರ |

**೯. ಪ>ಹ: ಬದಲಾವಣೆ**

ಬದಲಾವಣೆಯು ಭಾಷೆಯ ಜೀವಂತಿಕೆಯ ಲಕ್ಷಣ. ಭಾಷೆ ಬದಲಾದಾಗ ಭಾಷೆಯ ವಿವಿಧ ಅವಸ್ಥೆಗಳು ಉಂಟಾಗುವಾಗ ಶಬ್ದಗಳಲ್ಲೂ ವ್ಯತ್ಯಾಸಗಳಾಗುತ್ತವೆ. ಪ್ರಾಚೀನ ಕಾಲದಲ್ಲಿ ಬಳಕೆಯಾದ 'ಪ', 'ಹ' ಕಾರವಾಗಿ ಮಾರ್ಪಟ್ಟಿದೆ.

ಉದಾ: ಪೆರ್ಗ್ಗೂರು>ಹೆಗ್ಗೂರು (ಕ್ರಿ.ಶ. ೧೦೨೪ರಲ್ಲಿ ಬರೆಸಿದ ಪೆರ್ಗ್ಗೂರು ಶಾಸನ)

**೧೦. ಭಾಷಾವಾರು ವಾರ್ಗಿಕಗಳು**

ಕೆಲವು ಸ್ಥಳನಾಮಗಳಲ್ಲಿಯ ವಾರ್ಗಿಕಗಳು ಪ್ರದೇಶದಿಂದ ಅವು ಭಾಷಿಕ ಜನರು ತಮ್ಮ ಬೇರೆ ಪ್ರದೇಶಕ್ಕೆ ವಲಸೆ ಬಂದಿರುವುದರಿಂದ ಅವು ಆಯಾ ಭಾಷೆಗೆ ಸಂಪರ್ಕದಿಂದಾಗಿ ಹುಟ್ಟಿಕೊಂಡಿವೆ.

ಉದಾ:

| ಕನ್ನಡ | ತೆಲುಗು | ಸಂಸ್ಕೃತ | ಮರಾಠಿ |
|---|---|---|---|
| ಊರು | ಪಲ್ಲೆ (ಪಲ್ಲಿ) | ಗಿರಿ | ಗಾಂವ್ |
| ಏರಿ | ಗುತ್ತಿ | ಪುರ | ವಾಡಿ |
| ಕಲ್ಲು | | ಸಾಗರ | |
| ಕೆರೆ/ಗೆರೆ | | | |
| ಕೇರಿ/ಗೇರಿ | | | |
| ಕೊಪ್ಪ | | | |
| ಗಂಡಿ | | | |
| ಗಾವಿ | | | |
| ಗುಪ್ಪಿ | | | |
| ಗುಡ್ಡ | | | |
| ಮಟ್ಟಿ | | | |
| ಹಟ್ಟಿ | | | |
| ಹಾಳ | | | |

**೧೧. "ಆದೇಶಸಂಧಿ" ಕಾರ್ಯವಾಗಿರುವ ಸ್ಥಳನಾಮಗಳು**

"ಉತ್ತರಾದಿ ಕ್,ತ್,ಪ್ ವ್ಯಂಜನಗಳಿಗೆ ಆದೇಶವಾಗಿ ಗ್,ದ್,ಬ್ ವ್ಯಂಜನಗಳು ಸೇರುತ್ತವೆ." ಅಧ್ಯಯನ ಮಾಡುವಾಗ ಗುರುತಿಸಿದ ಆದೇಶ ಕಾರ್ಯವಾದ ಸ್ಥಳನಾಮಗಳು

ಉದಾ: ಕಂದು+ಕಲ್ಲು>ಕಂದಗಲ್ಲು (ಗ)

## ೧೨. "ಸ್ಥಳನಾಮಗಳು ಮತ್ತು ಸಮಾಸ"

"ಸಮಸ್ತಪದ" ಎರಡು ಅಥವಾ ಹೆಚ್ಚಿನ ಪದಗಳು ಸೇರಿ ಅರ್ಥ ಬರುವಂತೆ ಒಂದೇ ಪದವಾಗಿರುವುದು. ಸಮಾಸ ಎಂತಲೂ ಕರೆಯುವರು. ಸಮಾಸವಾಗುವಾಗ ಬಿಡಿ ಪದಗಳಲ್ಲಿ ಸೇರಿಸುವ ವಿಭಕ್ತಿ ಪ್ರತ್ಯಯಗಳು ಲೋಪವಾಗಿ ಪ್ರಾತಿಪದಿಕಗಳು ಒಂದಾಗುತ್ತವೆ, ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾದ ಸಮಾಸ ಸ್ಥಳನಾಮಗಳು ಹೀಗಿವೆ:

ಉತ್ತರ ಪದ ಪ್ರಧಾನ ಎಂದರೆ ಸ್ಥಳನಾಮಗಳಲ್ಲಿ ಸಾಮಾನ್ಯಾಂಶ (ವಾರ್ಗಿಕ)ವು ಪೂರ್ವಪದ (ವಿಶಿಷ್ಟ) ಅಧೀನವಾಗಿದ್ದು ಸ್ಥಳನಾಮವಾಗುವ ಸಂದರ್ಭದಲ್ಲಿ ವಾರ್ಗಿಕವೇ ಪ್ರಧಾನ ಕಾರ್ಯ ನಿರ್ವಹಿಸುವುದನ್ನು "ತತ್ಪುರುಷ ಸಮಾಸ ಪದ" ಎಂದು ಗುರುತಿಸಲಾಗಿದೆ.

ಉದಾ: ಹೊನ್ನಿನ+ಹಾಳ>ಹೊನ್ನಿಹಾಳ

ಬೂದಿಯ+ಹಾಳ>ಬೂದಿಹಾಳ

## ೧೩. ಕರ್ಮಧಾರೆಯ ಸಮಾಸಕ್ಕೆ

ಪೂರ್ವ ಪ್ರಧಾನವಾದದ್ದನ್ನು 'ವಿಶೇಷಣ' ಎಂದು, ಉತ್ತರ ಪದವು ವಿಶಿಷ್ಟವಾಗುತ್ತದೆ. ಸ್ಥಳನಾಮ ಸಮಾಸದಲ್ಲಿ ಪೂರ್ವಪದ ವಿಶಿಷ್ಟ "ವಿಶೇಷಣ" ಉತ್ತರ ಪದ ವಾರ್ಗಿಕ ವಿಶೇಷವಾಗಿರುತ್ತದೆ. ಇದನ್ನು ಕರ್ಮಧಾರೆಯ ಸಮಾಸ ಎನ್ನಲಾಗುವುದು.

ಹಿರಿದಾದ+ಊರು>ಹೆಗ್ಗೂರು

## ೧೪. ವಿರುದ್ಧಾರ್ಥ ಘಟಕಗಳಿರುವ ಸ್ಥಳನಾಮಗಳು

ಸ್ಥಳನಾಮಗಳಲ್ಲಿ ವಿರುದ್ಧಾರ್ಥಕ ವಿಶಿಷ್ಟಗಳನ್ನು ಅಧ್ಯಯನ ಮಾಡುವಾಗ ಗುರುತಿಸಲಾಗಿದೆ.

ಚಿಕ್ಕ ಆಲಗುಂಡಿ X ಹಿರೇ ಆಲಗುಂಡಿ

ಚಿಕ್ಕಕೊಪ್ಪ X ಹಿರೇ ಕೊಪ್ಪ

ಮ್ಯಾಗಿನೂರು ಯಡಹಳ್ಳಿ X ಕೆಳಗಿನೂರು ಯಡಹಳ್ಳಿ

## ೧೫. ಸಜಾತಿಯ ಒತ್ತಕ್ಷರಗಳ ಸ್ಥಳನಾಮಗಳು

೧. ಕಡಪಟ್ಟಿ = ಕ್+ಅ+ಡ್+ಅ+ಪ್+ಟ್+ಟ್+ಇ

೨. ಕಂದಗಲ್ಲ = ಕ್+ಅ+ನ್+ದ್+ಅ+ಗ್+ಅ+ಲ್+ಲ್+ಅ

೩. ಕೊಂತಿಕಲ್ಲ = ಕ್+ಒ+ನ್+ತ್+ಇ+ಕ್+ಅ+ಲ್+ಲ್+ಅ

೪. ಕೊಪ್ಪ = ಕ್+ಒ+ಪ್+ಪ್+ಅ

೫. ಕೋವಳ್ಳಿ = ಕ್+ಓ+ವ್+ಅ+ಳ್+ಳ್+ಇ

೬. ಗುಂಡನಪಲ್ಲೆ = ಗ್+ಉ+ನ್+ಡ್+ಅ+ನ್+ಅ+ಪ್+ಲ್+ಲ್+ಎ

೭. ಗುಡದಿನ್ನಿ = ಗ್+ಉ+ಡ್+ಅ+ದ್+ಇ+ನ್+ನ್+ಇ

೮. ಗೋವಿನದಿನ್ನಿ = ಗ್+ಓ+ವ್+ಇ+ನ್+ಅ+ದ್+ಇ+ನ್+ನ್+ಇ

೯. ಚಿಕ್ಕಹಂಚಿನಾಳ = ಚ್+ಇ+ಕ್+ಕ್+ಅ ಹ್+ಅ+ನ್+ಚ್+ಇ+ನ್+ಆ+ಳ್+ಅ

೧೦.ಚಿನಿವಾಲಕೊಪ್ಪ = ಚ್+ಇ+ನ್+ಇ+ವ್+ಆ+ಲ್+ಕ್+ಒ+ಪ್+ಪ್+ಅ

೧೧. ಜಾನಮಟ್ಟಿ = ಜ್+ಆ+ನ್+ಅ+ಮ್+ಟ್+ಟ್+ಇ

೧೨. ತುಮ್ಮರಮಟ್ಟಿ = ತ್+ಉ+ಮ್+ಮ್+ರ್+ಅ+ಮ್+ಟ್+ಟ್+ಇ

೧೩. ತೋಳಮಟ್ಟಿ = ತ್+ಓ+ಳ್+ಅ+ಮ್+ಟ್+ಟ್+ಇ

೧೪. ತೆಗ್ಗಿ = ತ್+ಎ+ಗ್+ಗ್+ಇ

೧೫. ಬಳ್ಳೂರ = ಬ್+ಅ+ಳ್+ಳ್+ಊ+ರ್+ಅ

೧೬. ಬಾದರದಿನ್ನಿ = ಬ್+ಆ+ದ್+ಅ+ರ್+ಅ+ದ್+ಇ+ನ್+ನ್+ಇ

೧೭. ಬಾವಲತ್ತಿ = ಬ್+ಆ+ವ್+ಅ+ಲ+ಅ+ತ್+ತ್+ಇ

೧೮. ಬೀರಕಬ್ಬಿ = ಬ್+ಈ+ರ್+ಅ+ಕ್+ಬ್+ಬ್+ಇ

೧೯. ಮನ್ನಿಕೇರಿ = ಮ್+ಅ+ನ್+ನ್+ಇ+ಕ್+ಏ+ರ್+ಇ

೨೦. ಮುತ್ತಲದಿನ್ನಿ = ಮ್+ಉ+ತ್+ತ್+ಅ+ಲ್+ಅ+ದ್+ಇ+ನ್+ನ್+ಇ

೨೧. ಯತ್ನಟ್ಟಿ = ಯ್+ಅ+ತ್+ನ್+ಅ+ಟ್+ಟ್+ಇ

೨೨. ಯಳ್ಳಿಗುತ್ತಿ = ಯ್+ಅ+ಳ್+ಳ್+ಇ+ಗ್+ಉ+ತ್+ತ್+ಇ

೨೩. ರೊಳ್ಳಿ = ರ್+ಒ+ಳ್+ಳ್+ಇ

೨೪. ಶಿರಗುಪ್ಪಿ = ಶ್+ಇ+ರ್+ಅ+ಗ್+ಉ+ಪ್+ಪ್+ಇ

೨೫. ಸಿದ್ದಾಪೂರ = ಸ್+ಇ+ದ್+ದ್+ಆ+ಪ್+ಊ+ರ್+ಅ

೨೬. ಸೊನ್ನ = ಸ್+ಒ+ನ್+ನ್+ಅ

೨೭ ಹೆಗ್ಗೂರ = ಹ್+ಎ+ಗ್+ಗ್+ಊ+ರ್+ಅ

೨೮. ಹೆರಕಲ್ಲ = ಹ್+ಎ+ರ್+ಅ+ಕ್+ಅ+ಲ್+ಲ್+ಅ

೨೯. ತಿಮ್ಮಾಪುರ = ತ್+ಇ+ಮ್+ಮ್+ಆ+ಪ್+ಉ+ರ್+ಅ

**೧೬. ವಿಜಾತೀಯ ಒತ್ತಕ್ಷರಗಳ ಸ್ಥಳನಾಮ ಮಾದರಿಗಳು**

೧. ಕೊರ್ತಿ = ಕ್+ಒ+ರ್+ತ್+ಇ

೨. ಢವಳೇಶ್ವರ = ಢ್+ಅ+ವ್+ಅ+ಳ್+ಏ+ಶ್+ವ್+ಅ+ರ್+ಅ

೩. ಯತ್ನಟ್ಟಿ = ಯ್+ಅ+ತ್+ನ್+ಅ+ಟ್+ಟ್+ಇ

೪. ಹದ್ರಾಳ = ಹ್+ಅ+ದ್+ರ್+ಆ+ಳ್+ಅ

೫. ಹೊನ್ಯಾಳ = ಹ್+ಒ+ನ್+ಯ್+ಆ+ಳ್+ಅ

***

*ಅಧ್ಯಾಯ ಐದು*

# ಸಮಾರೋಪ

ವ್ಯವಸ್ಥಿತವಾದ ಅಧ್ಯಯನವನ್ನು ಶಾಸ್ತ್ರ ಎನ್ನುವಂತೆ ನಾಮಾಧ್ಯಯನವು ಭಾಷೆಯ ನಿಯಮಗಳಿಗೆ ಅನುಸಾರವಾಗಿ ಅಧ್ಯಯನಕ್ಕೆ ಒಳಪಟ್ಟಿತು. ಭಾಷೆಯಲ್ಲಿನ ಎಲ್ಲ ಶಬ್ದಗಳಂತೆ ಹೆಸರು ಕೂಡ ಅಧ್ಯಯನಕ್ಕೆ ಒಳಪಡುವಂತಾಯಿತು, ಕೇವಲ ಹೆಸರುಗಳನ್ನು ಮಾತ್ರ ವ್ಯಾಕರಣ ನಿಯಮಾನುಸಾರವಾಗಿ, ವೈಜ್ಞಾನಿಕವಾಗಿ ಅಭ್ಯಸಿಸುವುದು ಪ್ರತ್ಯೇಕ ಶಾಸ್ತ್ರವಾಗಿ ಪರಿಗಣನೆ ಹೊಂದಿ ಅದನ್ನು "ನಾಮಾಧ್ಯಯನ ಶಾಸ್ತ್ರ" ಎಂದು ಕರೆಯಲಾಯಿತು.

ಮಾನವನ ಬುದ್ಧಿಶಕ್ತಿಗೆ ನಿದರ್ಶನವೆಂದರೆ, ತಾನು ಒಂದೆಡೆ ನೆಲೆಯೂರಿ ತನಗೆ ಬೇಕಾದುದನ್ನು ಸೃಷ್ಟಿಸಿಕೊಳ್ಳುವುದನ್ನು ಕಲಿತದ್ದು, ತಮ್ಮ ನೆಲೆಗಳನ್ನು ಗುರುತಿಸಿಕೊಳ್ಳುವಿಕೆಗಾಗಿ ಸಾಪೇಕ್ಷವಾದ, ಸಾಂಕೇತಿಕವಾದ ವಸ್ತು ಅಥವಾ ಪ್ರಾಕೃತಿಕ ಅಂಶಗಳ ಬಳಕೆ ಮಾಡಿರುವುದು ಇದು ಸಹಜವಾದ ಕ್ರಿಯೆಯಾಗಿದ್ದು, ಉದ್ದೇಶಪೂರ್ವಕವಾಗಿ ಸೃಷ್ಟಿಯಾದುದಲ್ಲ, ತನ್ನಿಂದತಾನೆ ಸೃಷ್ಟಿಯಾಗಿ ಪ್ರಚಾರಕ್ಕೆ ಬರುವಂಥದ್ದು, ಇಂತಹ ಸಂದರ್ಭದಲ್ಲಿ ಸ್ಥಳೀಯ ಭಾಷೆಯದೇ ಪ್ರಾಬಲ್ಯ, ನಂತರ ಇದನ್ನು ಬದಲಾಯಿಸಲು ಪ್ರಯತ್ನಪಟ್ಟರೂ ಬಹಳಷ್ಟು ಸಂದರ್ಭದಲ್ಲಿ ವಿಫಲವಾಗುತ್ತಿತ್ತು. ಹೀಗೆ ಮನುಷ್ಯನು ಪ್ರಕೃತಿಯೊಂದಿಗೆ ಸಂಘರ್ಷಿಸಿ, ಸಹಕರಿಸಿ ತಾನು ಬೆಳೆದಿರುವ ರೀತಿಯನ್ನು ಗುರುತಿಸಲು ಭಾಷೆಯನ್ನು ಬಳಸಿದನು. ಕಾಲ–ಕಾಲದ ಸಂಸ್ಕೃತಿಯನ್ನು ಸಾಮಾಜಿಕ, ರಾಜಕೀಯ, ಧಾರ್ಮಿಕ ಜೀವನದ ರೀತಿಯನ್ನು ಅರಿಯುವುದಕ್ಕೆ "ನಾಮಾಧ್ಯಯನವು ಸಹಾಯಕವಾಗಿದೆ." ಸ್ಥಳನಾಮಾಧ್ಯಯನವು ಭಾಷಾವಿಜ್ಞಾನ, ಇತಿಹಾಸ, ಪುರಾತತ್ವ ಶಾಸ್ತ್ರ, ಭೂಗೋಳ, ಜಾನಪದ, ಸಸ್ಯಶಾಸ್ತ್ರ ಇತ್ಯಾದಿಗಳಿಂದ ಸಹಾಯಪಡೆದು ಅವುಗಳಿಗೂ ಸಹಾಯ ನೀಡಬಲ್ಲ ಒಂದು ಶಾಸ್ತ್ರೀಯ ವಿಷಯವಾಗಿದೆ.

ಸ್ಥಳ ನಾಮಾಧ್ಯಯನ; ವೈಜ್ಞಾನಿಕ ಮತ್ತು ಶಾಸ್ತ್ರೀಯ ತಳಹದಿಯ ಮೇಲೆ ಮಾಡುವ ಅಧ್ಯಯನವಾಗಿದೆ. ಸ್ಥಳನಾಮಗಳಂತಹ ಸಾಂಸ್ಕೃತಿಕ ಪಳಿಯುಳಿಕೆಗಳು ಒಂದು ಭೌಗೋಳಿಕ ಪರಿಸರದ ಸಂಸ್ಕೃತಿಯ ನಿರುಕ್ತಿಗಳಲ್ಲಿ ಅಗತ್ಯವಾಗಿ ಬಳಸಿಕೊಳ್ಳಬೇಕಾದ ಸಾಮಾಗ್ರಿಗಳೆಂಬುದನ್ನು

ಇಲ್ಲಿಯವರೆಗಿನ ಅಧ್ಯಯನಗಳಿಂದ ಎತ್ತಿತೋರಿಸಿದೆ. ಈಗಾಗಲೇ ಈ ಪರಿಸರದ ಕುರಿತಾಗಿರು ಮಾಹಿತಿಯನ್ನು ವಿವಿಧ ಹಿನ್ನೆಲೆಯಲ್ಲಿ ಆಗಿರುವ ಅಧ್ಯಯನಗಳನ್ನು ಸಮೀಕ್ಷೆ ಮಾಡಲಾಗಿದೆ.

ಇದಕ್ಕಾಗಿ ಸ್ಥಳನಾಮಗಳನ್ನು ಪ್ರಾಕೃತಿಕ ಸ್ಥಳನಾಮಗಳು, ಸಾಂಸ್ಕೃತಿಕ ಸ್ಥಳನಾಮಗಳು, ಸಾಮಾಜಿಕ ಸ್ಥಳನಾಮಗಳು ಹಾಗೂ ಸಂಕೀರ್ಣ ಸ್ಥಳನಾಮಗಳೆಂದು ವರ್ಗೀಕರಿಸಿಕೊಂಡು ಅಧ್ಯಯನವನ್ನು ಮಾಡಲಾಗಿದೆ.

ಸ್ಥಳನಾಮಗಳು ಭಾಷಿಕವಾಗಿ ಗಮನಾರ್ಹವಾಗಿ ಎಂಬುದನ್ನು ಸ್ಥಳನಾಮಗಳ ಭಾಷಿಕ ಸ್ವರೂಪ ಎನ್ನುವ ವಿಭಾಗದಲ್ಲಿ ಅವುಗಳನ್ನು ಗುರುತಿಸಲಾಗಿದೆ, ಇಲ್ಲಿನ ಸ್ಥಳನಾಮಗಳಲ್ಲಿ ಒಂದು ಆಕೃತಿಮಾ, ಎರಡು ಆಕೃತಿಮಾ ಮತ್ತು ಎರಡಕ್ಕಿಂತ ಹೆಚ್ಚು ಆಕೃತಿಮಾಗಳ ಒಳಗೊಂಡಿರುವುದನ್ನು ಗಮನಿಸಲಾಗಿದೆ.

ಸಂಗ್ರಹಿಸಿದ ಸ್ಥಳನಾಮಗಳಲ್ಲಿ ಪ್ರಾಕೃತಿಕ ಅಂಶಗಳಲ್ಲಿ ಜಲವಾಚಿ, ನಿಸರ್ಗವಾಚಿ, ಪ್ರಾಣಿ-ಪಕ್ಷಿವಾಚಿ, ಸಸ್ಯವಾಚಿ ಎಂದೂ, ಸಾಮಾಜಿಕ ಅಧ್ಯಯನದಲ್ಲಿ ಜಾತಿ, ವೃತ್ತಿವಾಚಿಗಳೆಂದೂ, ಸಾಂಸ್ಕೃತಿಕ ವಲದಯಲ್ಲಿ ದೈವವಾಚಿ, ವ್ಯಕ್ತಿವಾಚಿ, ಶಾಸನಸೂಚಿತ ಎಂದೂ ಹಾಗೂ ಮಾನವನ ಸಾಪೇಕ್ಷಿತ ಮತ್ತು ಮಿತವ್ಯಯೀಕರಣದಿಂದಾಗಿರುವ ಸಂಕೀರ್ಣ ಸ್ಥಳನಾಮಗಳೆಂದು ಗುರುತಿಸಿ ಗಮನಿಸಿ ವಿಶ್ಲೇಷಿಸಲಾಗಿದೆ.

ಸ್ಥಳನಾಮಗಳ ಪ್ರಾದೇಶಿಕವಾರು ಅಧ್ಯಯನದಿಂದ ಭೂಗೋಳ ಶಾಸ್ತ್ರಜ್ಞರು ಸ್ಥಳನಾಮಗಳಂತಹ ಆಕರಗಳನ್ನು ತಮ್ಮ ಅಧ್ಯಯನಗಳಿಗೆ ಪೂರಕ ಸಾಮಗ್ರಿಯಾಗಿ ತೆಗೆದುಕೊಂಡು ವಿಶ್ಲೇಷಿಸುವ ಅಗತ್ಯವಿದೆಯೆನ್ನಬಹುದು, ಅಲ್ಲದೆ ಹೆಸರುಗಳ ರೂಪದಿಂದ ಭೌಗೋಳಿಕ ವಿವರ (Out line) ನೀಡಬಹುದು. ಕಾರಣ ಭೌಗೋಳಿಕ ಇತಿಹಾಸದ ಅಧ್ಯಯನಕ್ಕೆ ಗ್ರಾಮ ನಾಮಗಳ ಪಾತ್ರ ಸಹಜವಾಗಿರಬಹುದಾಗಿದೆ.

ಪ್ರಸ್ತುತ ಅಧ್ಯಯನದಿಂದ ಬಾಗಲಕೋಟ ಜಿಲ್ಲೆಯ ಬೀಳಗಿ ತಾಲೂಕಿನಲ್ಲಿ ಗುಡ್ಡ, ಬೆಟ್ಟ, ಕಂದಕ, ಝುರಿ ಮುಂತಾದ ಪ್ರಾಕೃತಿಕ ಪರಿಸರ, ಸಾಮಾಜಿಕ ಪರಿಸರ ಜೊತೆಗೆ ಸಾಂಸ್ಕೃತಿಕತೆ ಹಾಗೂ ರಾಜಕೀಯ ನೀತಿಗಳ ಮೂಲಕ ಆ ಗ್ರಾಮ ಬೆಳೆದು ಬಂದಿರುವ ಐತಿಹಾಸಿಕತೆಯನ್ನು ಸಂಗತಿಗಳನ್ನು ಪ್ರಸ್ತುತ ಅಧ್ಯಯನದ ಮೂಲಕ ಅರಿಯುವ ಪ್ರಯತ್ನವನ್ನು ಮಾಡಲಾಗಿದೆ.

ಒಂದು ಸಂಸ್ಕೃತಿಯಲ್ಲಿ ವ್ಯಕ್ತಿ, ದೈವ, ವೃತ್ತಿ, ಜಾತಿ, ಪಟ್ಟಣ, ನಗರ, ಗ್ರಾಮ, ಪ್ರಾಣಿ, ಪಕ್ಷಿ, ದೇವಾಲಯಗಳು ಮುಂತಾದವು ಮುಖ್ಯವಾದವು. ಈ ಎಲ್ಲಾ ಸಂಗತಿಗಳಿಂದ ಚಲಿಸುವ ಸಾಮಾಜಿಕ ಓಘವೇ ಸಾಂಸ್ಕೃತಿಕ ಸ್ಥಳನಾಮಗಳು.

ವ್ಯಕ್ತಿ-ಕುಟುಂಬದ ಅತಿ ಮುಖ್ಯ ಘಟಕ; ಇಂತಹ ವ್ಯಕ್ತಿ ಕೇಂದ್ರಿತ ಕುಟುಂಬಗಳು ಸೇರಿ ಒಂದು ಊರು ಆಗುತ್ತದೆ. ವಿಶೇಷವಾದ ನಡೆ-ನುಡಿ ವ್ಯಕ್ತಿತ್ವವನ್ನು ಹೊಂದಿದವರ ಹೆಸರುಗಳು ಸ್ಥಳಗಳಿಗೆ ನಿರ್ದೇಶನಗೊಳ್ಳುತ್ತವೆ, ಅಲ್ಲದೆ ಊರಿಗೆ ಬಂದಿರುವ ಆಪತ್ತನ್ನು ಕಳೆಯಲು ಮುಂತಾದ ಕಾರಣಕ್ಕಾಗಿ ಆ ವ್ಯಕ್ತಿಯ ಹೆಸರನ್ನೇ ತಮ್ಮ ನೆಲೆಗಳಿಗೆ ಇಟ್ಟುಕೊಂಡು ತಿಳಿಯುತ್ತದೆ. ಅದರಂತೆ ಗ್ರಾಮ ಸಮಾಜಗಳು ದೇವರು ಧರ್ಮವನ್ನು ತಮ್ಮ ಅವಿಭಾಜ್ಯ ಅಂಗವೆಂದು ನಂಬಿವೆ, ಭಕ್ತಿ-

ಭಯದ ನೆಲೆಯಲ್ಲಿ ತಮ್ಮ ವಾಸಸ್ಥಳಗಳಿಗೆ ದೈವದ ಹೆಸರನ್ನು ಕರೆದುಕೊಂಡ ಬಗೆಗೆ ಮಾಹಿತಿ ಇದೆ. ಹೀಗೆ ದೈವದ ಹೆಸರಿಡುವುದರಿಂದ ಸಮಾಜವು ಸುಖ-ಸಮೃದ್ಧಿಗಳಿಗೆ ಶುಭವಾಗುವುದು ಎಂಬ ನಂಬಿಕೆ.

ವೃತ್ತಿ ಮನುಷ್ಯನ ಸಹಜ ಧರ್ಮ. ಆತನು ಒಂದೆಡೆ ಸ್ಥಿರವಾಸಿಯಾಗಿ ತಾನು ತನ್ನ ಕುಟುಂಬ ಹಾಗೂ ಸಮಾಜದ ಬದುಕಿಗಾಗಿ ವೃತ್ತಿಗಳನ್ನು ನಿರ್ಮಿಸಿದನು, ಅದರಲ್ಲೂ ವ್ಯವಸಾಯವನ್ನು ಪ್ರಧಾನವಾಗಿಟ್ಟುಕೊಂಡಿರುವ ಇತರ ಪರಿಕರಗಳಾದ ಬಡಿಗ, ಕಂಬಾರ, ಚಮ್ಮಾರ, ವ್ಯಾಪಾರಿ ಮುಂತಾದ ವೃತ್ತಿಗಳನ್ನು ಮಾಡಿಕೊಂಡನು. ಹೀಗೆ ಕಸುಬುದಾರರು ತಮ್ಮದೇ ಆದ ನಿರ್ದಿಷ್ಟ ಭೂಪ್ರದೇಶವನ್ನು ಗುರುತಿಸಿಕೊಂಡು ನೆಲೆಯೂರಿದರು. ಆವೃತ್ತಿಗಳಿಂದಲೇ ಆ ಪ್ರದೇಶಕ್ಕೆ ಹೆಸರಿಡಲಾಯಿತು, ಆ ವೃತ್ತಿಯವರ ಜೊತೆಗೆ ಸಮಾಜೋಪಯೋಗಿ ವೃತ್ತಿ ಬಾಂಧವರ ಜೊತೆಗೆ ಸಹಕರಿಸುವ ಮೂಲಕ ಕುಂಬಾರರಿಂದ ಹಿಡಿದು ಪುರೋಹಿತ ವರ್ಗದವರ ಜೊತೆಗೆ ಸಹಬಾಳ್ವೆಯಿಂದ ಬೆಳೆದುಬಂದರು.

ಮಾನವನು ಪ್ರಾಗೈತಿಕಹಾಸದಲ್ಲಿ ಬೆಳೆದು ಬಂದ ರೀತಿಯನ್ನು ಈ ಪ್ರದೇಶದಿಂದ ಗುರುತಿಸಲಾಗುತ್ತದೆ. ಶಿಲಾಯುಗದ ಪಳಿಯುಳಿಕೆಗಳು ದೊರೆಯುವ ಮೂಲಕ ಆ ಗ್ರಾಮ ನಾಮಕ್ಕೆ ದೊರೆತ ಸಾಮಗ್ರಿಗಳು ಸಹ ಸಂಬಂಧವಿರುವುದನ್ನು ತಿಳಿಯಲಾಯಿತು. ಇಂತಹ ಪರಿಕರಗಳು ಸಿಕ್ಕಾಗ ಅವುಗಳ ನಿರ್ಮಾಣಕ್ಕೆ ಬೇಕಾದ ಕಚ್ಚಾ ಸಾಮಗ್ರಿಯು ಈ ಪ್ರದೇಶದಲ್ಲಿ ಲಭ್ಯವಾಗಿದೆ ಎಂದು ತಿಳಿದಾಗ ಅದಿರುಗಳ ನಿಕ್ಷೇಪದ ಭೌಗೋಳಿಕ ಮಾಹಿತಿ ಲಭ್ಯವಾಯಿತು.

ಹೆರಕಲ್ಲ>ಎರಕದ+ಕಲ್ಲ- ಇಲ್ಲಿ ಶಿಲಾಯುಗದ ಆಯುಧಗಳು ಪರಿಕರಗಳು ದೊರೆತಿರುವುದರಿಂದ ಆ ಊರಿಗೆ ಹೆಸರು ಬಂದಿದೆ. ಅಲ್ಲದೇ 'ಬೂದಿಹಾಳ' ಎಂಬಂತಹ ಹೆಸರಿನ ಗ್ರಾಮಗಳು ಈ ಪ್ರದೇಶವಷ್ಟೇ ಅಲ್ಲ ಇಡೀ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುತ್ತವೆ ಅಂದಾಗ ಗ್ರಾಮ ನಾಮಗಳು ಪ್ರಾಚೀನ ಐತಿಹಾಸಿಕ ಚಹರೆಗಳಾದ ಪುರಾತತ್ವ ಪರಿಸರವನ್ನು ಪ್ರತಿನಿಧಿಸುತ್ತವೆ. "ಬೂದಿ" ಯಿಂದ ಆರಂಭವಾಗುವ ಸ್ಥಳನಾಮಗಳು ಆದಿ ಮಧ್ಯಶಿಲಾಯುಗದ ಮಾನವನ ನೆಲೆಗಳೆಂದು ಗುರುತಿಸಲು ಬೀಳಗಿ ತಾಲೂಕಿನ ಭೌಗೋಳಿಕ ಪರಿಸರದಲ್ಲಿ ಹಲವಾರು ಕುರುಹುಗಳಿವೆ.

ವರ್ಣಾಶ್ರಮದ ಪದ್ಧತಿಯ ನಂತರ ಕಸುಬಿನ ಹಿನ್ನೆಲೆಯಲ್ಲಿ ಜಾತಿಪದ್ಧತಿ ಹುಟ್ಟಿಕೊಂಡಿತು. ಅದು ಕಸುಬನ್ನು ಮೀರಿಸಿ ಬೆಳೆದುಬಂದಿತು. ಬಡಿಗೇರರು, ಚಮ್ಮಾರರು, ಬೇಡರು, ಪುರೋಹಿತರು ಮುಂತಾದ ಸಮುದಾಯದ ಹೆಸರಿನ ಗ್ರಾಮ ನಾಮಗಳಾದವು.

ವೃತ್ತಿಯಿಂದ ಮತ್ತು ಜಾತಿಯಿಂದ ಸ್ಥಳನಾಮ ನಿರ್ದೇಶಿಸಲ್ಪಟ್ಟಿವೆ, ಇದರಿಂದ ನಮ್ಮ ನಾಡಿನ ಪ್ರಾಚೀನ ಸಮುದಾಯಗಳ ಸಾಂಸ್ಕೃತಿಕ ಅಧ್ಯಯನಕ್ಕೆ ಇಂತಹ ಗ್ರಾಮನಾಮಗಳು ಪೂರಕ ಮಾಹಿತಿಯನ್ನು ನೀಡುತ್ತವೆ ಅಲ್ಲದೆ ಕಾತರಕಿ, ಮುಂಡಗನೂರು, ಕೋಲೂರು ಮುಂತಾದ ಗ್ರಾಮನಾಮಗಳಿಂದ ಕ್ಯಾತರು-ಮುಂಡರು, ಕೋಲರು ಎಂಬಂತಹ ಜನಾಂಗದವರು ಉತ್ತರ ಭಾರತದ ಆಗ್ನೇಯ ಪ್ರದೇಶದಿಂದ ಅಲೆಮಾರಿಯಾಗಿ ಬಂದಿರಬಹುದಾಗಿದೆ.

ಸಂಸ್ಕೃತಿಯ ಅಧ್ಯಯನದಲ್ಲಿ ಶಾಸನವು ಪ್ರಮುಖ ಆಕರ, ಈ ಪರಿಸರದಲ್ಲಿ ಹಲವಾರು ಶಾಸನಗಳು ದೊರೆತಿವೆ, ಅವು ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತವೆ. ಪ್ರಾಚೀನ ಮಾನವನ ಬದುಕಿನ ಮೌಲ್ಯಗಳಾದ, "ವೀರ" ಮತ್ತು "ದಾನ"ಗಳನ್ನು ತಿಳಿಸುತ್ತವೆ. ಜೊತೆಗೆ ಊರಿನ ಪ್ರಾಚೀನ ಹೆಸರು ಮತ್ತು ಭಾಷಿಕ ವ್ಯತ್ಯಾಸವನ್ನು ತಿಳಿಸುತ್ತವೆ. ಪೆರ್ಗೂರ (ಕ್ರಿ.ಶ. ೧೦೨೪), ಬೀಳಗಿ (ಕ್ರಿ.ಶ. ೧೫೪೯), ಬಾಡಗಿ (ಕ್ರಿ.ಶ. ೧೨೨೩), ಯಡಹಳ್ಳಿ (ಕ್ರಿ.ಶ. ೧೩ನೇ ಶತಮಾನ) ಮುಂತಾದ ಶಾಸನಗಳು ಈ ಪರಿಸರದ ಸಂಸ್ಕೃತಿಯನ್ನು ಎತ್ತಿ ಹಿಡಿದ ಕನ್ನಡಿಯಾಗಿವೆ.

ಕುಟುಂಬ ಕೇಂದ್ರಿತ ಸಮುದಾಯಗಳು ತಮ್ಮೊಂದಿಗೆ ಜೀವಿಸುವ ಪಶು, ಪಕ್ಷಿ, ಪ್ರಾಣಿಗಳನ್ನು ತಮ್ಮ ಜೀವನದ ಭಾಗವೆಂದು ತಿಳಿದು ಆ ಕಾರಣದಿಂದ ತಮಗೆ ಮುಖ್ಯವೆನಿಸಿದ ಗೋವು, ಎತ್ತು, ಹಾವು, ನಾಯಿ, ನವಿಲು ಮುಂತಾದವುಗಳು ಅವರ ನೆಲೆಗಳಿಗೆ ಹೆಸರುಗಳಾಗಿ ಬಂದಿರುವುದನ್ನು ಗಮನಿಸಲಾಗಿದೆ.

ಸ್ಥಳನಾಮಗಳಲ್ಲಿ ಗಮನಿಸಬಹುದಾದ ಮತ್ತೊಂದು ಮುಖ್ಯ ಅಂಶವೆಂದರೆ ಉದ್ದೇಶಿತ ಪ್ರದೇಶವು ನೀರಿನಿಂದ ಆವೃತವಾಗಿದ್ದರೆ ಅಥವಾ ನೀರಿನ ಒರತೆಗಳು ಹೆಚ್ಚಾಗಿದ್ದರೆ ಜಲವಾಚಿ ಸೂಚಕ ಸ್ಥಳನಾಮಗಳು ಕಂಡುಬರುತ್ತವೆ. ಬೆಟ್ಟ-ಗುಡ್ಡ ಭೂಪ್ರದೇಶವಾಗಿದ್ದರೆ ವಿಶಿಷ್ಟ ಹಾಗೂ ನಿರ್ದಿಷ್ಟಗಳನ್ನು ಒಳಗೊಂಡಿರುತ್ತದೆ. ಆಯಾ ಪ್ರದೇಶದ ವಿಶಿಷ್ಟತೆಯನ್ನು ಬಿಂಬಿಸುವುದೇ ಸ್ಥಳನಾಮದ ಮುಖ್ಯ ಗುಣವಾಗಿದೆ. ಕೆಲವೊಮ್ಮೆ ವಾರ್ಗಿಕಗಳು ಉತ್ಪ್ರೇಕ್ಷೆಯ ಸ್ಥಳನಾಮಗಳಾಗಿವೆ. ಕೆರೆಯು-ಸಾಗರವೆಂದು ಉತ್ಪ್ರೇಕ್ಷೆಗೊಂಡು ವಾರ್ಗಿಕವಾಗಿ ಬಳಕೆಯಾಗಿವೆ

ಪ್ರಾಕೃತಿಕ ಲಕ್ಷಣ ಸೂಚಿಸುವ ಶಿಲಾವಾಚಿ, ಜಲವಾಚಿ, ಸಸ್ಯವಾಚಿ, ಪ್ರಾಣಿ-ಪಕ್ಷಿವಾಚಿ, ಮಣ್ಣಿನ ಗುಣ ಸೂಚಿಸುವ ಕ್ಷೇತ್ರವಾಚಕ ಸ್ಥಳನಾಮಗಳ ಮಾದರಿಯ ವರ್ಗೀಕರಣ ಮಾಡಲಾಗಿದೆ. ಸಾಮಾಜಿಕ, ಸಾಂಸ್ಕೃತಿಕ ಲಕ್ಷಣ ಸೂಚಿಸುವ ಜಾತಿವಾಚಿ, ವೃತ್ತಿವಾಚಿ ಹಾಗೂ ದೈವವಾಚಿ ಸ್ಥಳನಾಮಗಳನ್ನು ಅವಶ್ಯಕವಾದ ವರ್ಗೀಕರಣವನ್ನು ಮಾಡಿಕೊಳ್ಳಲಾಗಿದೆ.

ಸ್ಥಳನಾಮಗಳಲ್ಲಿ ಕೆಲವು ನಿರ್ದಿಷ್ಟ ವರ್ಗೀಕರಣ ಮಾದರಿಗೆ ಸೇರಿಸಲು ಸಾಧ್ಯವಿರುವುದಿಲ್ಲ, ಅಂತಹ ಸ್ಥಳನಾಮಗಳನ್ನು ಸಂಕೀರ್ಣ ಸ್ಥಳನಾಮಗಳೆಂದು ಗುರುತಿಸಲಾಗಿದೆ. ಪರಿಮಾಣವಾಚಿ-ಸಾಪೇಕ್ಷ ಸ್ಥಳನಾಮಗಳು ಪ್ರತಿಕರಣ ವಸತಿ, ನಿರ್ವಸತಿ ಹಾಗೂ ಪುನರ್‌ವಸತಿ ಸ್ಥಳನಾಮಗಳನ್ನು ಸಂಕೀರ್ಣ ಮಾದರಿಯಲ್ಲಿ ಸೇರಿಸಲಾಗಿದೆ.

**ಅಧ್ಯಯನದ ಫಲಿತಗಳು**

ಉದ್ದೇಶಿತ ಬಾಗಲಕೋಟ ಜಿಲ್ಲೆಯ ಬೀಳಗಿ ತಾಲೂಕಿನ ಪ್ರಾಕೃತಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಐತಿಹಾಸಿಕ ಸಂಗತಿಗಳನ್ನು.ನಾಮಗಳ ಅಧ್ಯಯನದ ಮೂಲಕ ಅರಿಯುವ ಪ್ರಯತ್ನ ಮಾಡಲಾಗಿದೆ. ನಿಜ ನಿಷ್ಪತ್ತಿಯ ದೃಷ್ಟಿಕೋನದಿಂದ ಆಯ್ದುಕೊಂಡ ಪ್ರಸ್ತುತ ವಿಷಯದ ಅಧ್ಯಯನವನ್ನು ವಿವಿಧ ದೃಷ್ಟಿಕೋನದಿಂದ ನೋಡುವ ಉದ್ದೇಶದಿಂದ ಲಭ್ಯವಾದ ಕೃತಿ, ಶಾಸನ, ಲೇಖನ, ಮೌಖಿಕ ಮಾಹಿತಿಗಳನ್ನು ಸಂಗ್ರಹಿಸಿ ಈ ಮಾದರಿಯನ್ನು ಸಿದ್ಧಪಡಿಸಲಾಗಿದೆ.

ಸ್ಥಳನಾಮ ಅಧ್ಯಯನದಲ್ಲಿ ಭಾಷಿಕ ಮಾದರಿಯನ್ನು ಅಳವಡಿಸಿಕೊಂಡು ಸ್ಥಳನಾಮ ಘಟಕಗಳನ್ನು ವರ್ಗೀಕರಣ ಮಾಡಲಾಗಿದೆ, ಘಟಕದ ಸಂಖ್ಯೆ ೧ರಿಂದ೫ರವರೆಗೆ ಇರುವುದನ್ನು ಗುರುತಿಸಿ ವಿಶ್ಲೇಷಣೆ ಮಾಡಲಾಗಿದೆ. ಸೌಲಭಾಕಾಂಕ್ಷೆಯಿಂದಾಗಿರುವ ಸ್ಥಳನಾಮಗಳನ್ನು ಗುರುತಿಸಲಾಗಿದೆ. ಸ್ಥಳನಾಮಗಳಲ್ಲಿ ವಿಶಿಷ್ಟಗಳನ್ನು ಬಳಸದೆ ವಾರ್ಗಿಕಗಳೇ ಸ್ಥಳನಾಮಗಳಾಗಿರುವ ರಚನೆಗಳನ್ನು ಗುರುತಿಸಲಾಗಿದೆ. ವಾರ್ಗಿಕ ವಿಶಿಷ್ಟವಾಗಿರುವುದಕ್ಕೆ ಮಾದರಿಗಳ ವಿಶ್ಲೇಷಣೆ ಮಾಡಲಾಗಿದೆ. ಸ್ಥಳನಾಮಗಳ ಮೇಲೆ ಸಂಸ್ಕೃತಿಗಳ ಪ್ರಭಾವ ಬೀರಿರುವುದನ್ನು ಅಧ್ಯಯನದಲ್ಲಿ ಬಳಕೆ ಮಾಡಲಾಗಿದೆ.

ಶಿಷ್ಟರೂಪದ/ಬರೆಹರೂಪದ ಸ್ಥಳನಾಮಗಳು ಹಾಗೂ ಜನಸಾಮಾನ್ಯರ ಉಚ್ಚಾರಣೆಯ ನಡುವೆ ವ್ಯತ್ಯಾಸವನ್ನು ಗುರುತಿಸಲಾಗಿದೆ. ಹ್ರಸ್ವೀಕರಣವು ಸಾಮಾನ್ಯವಾದ ಬದಲಾವಣೆಯಾಗಿರುತ್ತದೆ, ಅಕ್ಷರಸ್ಥರ ಉಚ್ಚಾರಣೆಯು ಶಿಷ್ಟರೂಪ ಅಥವಾ ಬರೆಹರೂಪವನ್ನು ಹೋಲುತ್ತವೆ, ಅನಕ್ಷರಸ್ಥರ ಉಚ್ಚಾರಣೆ ಗ್ರಾಮ್ಯರೂಪ ಹೊಂದಿರುವುದನ್ನು ವಿಶ್ಲೇಷಿಸಲಾಗಿದೆ.

ಸ್ಥಳನಾಮಗಳ ಪೂರ್ವಪದ ವಿಶಿಷ್ಟವು ಸ್ವರಾದಿಯು ವ್ಯಂಜನಾದಿಯಾಗಿರುವುದನ್ನು ಒಳಗೊಂಡಿರುವುದನ್ನು ಗಮನಿಸಲಾಗಿದೆ. ಗ್ರಾಮನಾಮಗಳು ಸಾಮಾನ್ಯವಾಗಿ ಸ್ವರಾಂತವಾಗಿರುವುದು ಅವು ಜನತೆಯ ಸೌಲಭಾಕಾಂಕ್ಷೆ ಹಾಗೂ ಮಿತವ್ಯಯಿಕರಣದಿಂದಾಗಿ ವ್ಯಂಜನಾಂತವಾಗಿರುವುದನ್ನು ಗಮನಿಸಲಾಗಿದೆ.

ಮಹಾಪ್ರಾಣಗಳು ಕನ್ನಡದವುಗಳು ಅಲ್ಲ ಎನ್ನುವುದನ್ನು ಅನಕ್ಷರಸ್ಥ ಉಚ್ಚಾರಣೆಯ ಮೂಲಕ ಗುರುತಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಮಹಾಪ್ರಾಣಗಳನ್ನೊಳಗೊಂಡ ಸ್ಥಳನಾಮಗಳೂ ಕಡಿಮೆ ಇರುವುದರಿಂದ ಈ ಪ್ರದೇಶವು ಕನ್ನಡದ ವಿಶಿಷ್ಟ ಲಕ್ಷಣಗಳನ್ನು ಹೊಂದಿರುವುದು ಅಧ್ಯಯನದಿಂದ ತಿಳಿದುಬಂದಿದೆ.

ಸಾಮಾಜಿಕ ಅಂಶಗಳಾದ ಜಾತಿ ಮತ್ತು ವೃತ್ತಿ ಸೂಚಕ ಸ್ಥಳನಾಮಗಳನ್ನು ಅಧ್ಯಯನದಲ್ಲಿ ಗುರುತಿಸಲಾಗಿದೆ, ಇವೆರಡು ಒಂದಕ್ಕೊಂದು ಸಹ ಸಂಬಂಧವನ್ನು ಹೊಂದಿವೆಯಾದರೂ ವೃತ್ತಿವಾಚಿ ಸ್ಥಳನಾಮಗಳು ಕೆಲವೊಮ್ಮೆ ಜಾತಿಯನ್ನು ಸೂಚಿಸುತ್ತವೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿರುವ ಎಲ್ಲಾ ಜಾತಿ ಸ್ಥಳನಾಮಗಳನ್ನು ಪ್ರತ್ಯೇಕವಾಗಿ ಗುರುತಿಸಲಾಗಿದೆ. ಜಾತಿವಾಚಿ ಸ್ಥಳನಾಮಗಳಲ್ಲಿ ಆಯ್ಕೆ ಮಾಡಿದ ಮಾದರಿಗಳನ್ನು ವಿಶ್ಲೇಷಣೆಗೆ ಒಳಗು ಮಾಡಲಾಗಿದೆ. ವೃತ್ತಿಸೂಚಿತ ಸ್ಥಳನಾಮಗಳನ್ನು ವಿಶ್ಲೇಷಣೆಗೆ ಒಳಗು ಮಾಡಿ, ವೃತ್ತಿಸೂಚಕ ವಿಶಿಷ್ಟ ಅಂಶಗಳಲ್ಲಿ ಆಗಿರುವ ಭಾಷಿಕ ಸ್ಥಿತ್ಯಂತರಗಳನ್ನು ಗುರುತಿಸಲಾಗಿದೆ.

ದೈವವಾಚಿ ಸ್ಥಳನಾಮಗಳನ್ನು ಸಾಂಸ್ಕೃತಿಕ ಅಂಶಗಳನ್ನು ತಿಳಿಸುತ್ತವೆ, ಅಧ್ಯಯನದ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಸ್ಥಳನಾಮಗಳಲ್ಲಿ ದೇವರ ಹೆಸರುಗಳು ಸ್ಥಳನಾಮದ ವಿಶಿಷ್ಟಗಳಾಗಿರುತ್ತವೆ, ಕೆಲವು ದೇವರ ಹೆಸರೇ ನಿರ್ದಿಷ್ಟವಾಗಿದ್ದನ್ನು ಗುರುತಿಸಲಾಗಿದೆ. ಅಧ್ಯಯನದಲ್ಲಿ ಒಟ್ಟಾರೆ ಹಿಂದೂ ಧರ್ಮದ ಸಂಸ್ಕೃತಿಗೆ ಸೇರಿದ ಸ್ಥಳನಾಮಗಳು ಕಂಡುಬಂದಿವೆ.

ಪ್ರಾಕೃತಿಕ ಹಾಗೂ ಭೌಗೋಳಿಕ ಲಕ್ಷಣಗಳನ್ನು ಸೂಚಿಸುವ ಸ್ಥಳನಾಮಗಳ ಅಧ್ಯಯನ ಮಾಡಲಾಗಿದೆ. ಅಂತಹ ಸ್ಥಳನಾಮಗಳಲ್ಲಿ ಭೌಗೋಳಿಕ ಅಂಶಗಳಾದ ಬೆಟ್ಟ, ಗುಡ್ಡ, ಮಣ್ಣಿನಗುಣ ಸೂಚಿಸುವ ಪ್ರಾಕೃತಿಕ ಅಂಶಗಳಾದ ಸಸ್ಯ, ಪ್ರಾಣಿ, ಪಕ್ಷಿಗಳ ಅಂಶ ಸೂಚಿಸುವ ಸ್ಥಳನಾಮಗಳನ್ನು ಗುರುತಿಸಿ ವಿಶ್ಲೇಷಿಸಲಾಗಿದೆ.

ಜಲವಾಚಿ ಸ್ಥಳನಾಮಗಳಲ್ಲಿ ವಿಶಿಷ್ಟ ಹಾಗೂ ಸಾಮಾನ್ಯಾಂಶಗಳಲ್ಲಿ ಬಳಕೆಯಾಗಿರುವ ಜಲಸೂಚಕ ಅಂಶಗಳಾದ ಸಾಗರ, ಹಳ್ಳ, ಕೆರೆ, ಝುರಿ ಮುಂತಾದವುಗಳನ್ನು ಗುರುತಿಸಿ ವಿಶ್ಲೇಷಿಸಲಾಗಿದೆ.

ಸ್ಥಳನಾಮ ಸೃಷ್ಟಿಯಾದ ಕಾಲದಲ್ಲಿನ ಹಿನ್ನೆಲೆಯು ನಂತರದಲ್ಲಿ ಬದಲಾವಣೆಯಾಗಿರುತ್ತವೆ ಇಂತಹ ಸಂದರ್ಭದಲ್ಲಿ ಸ್ಥಳನಾಮಗಳು ಸ್ಥಿತ್ಯಂತರ ಸಾಧ್ಯತೆಯಿರುತ್ತದೆ. ಐತಿಹಾಸಿಕ ಕಾರಣಗಳಿಂದ ಸೃಷ್ಟಿಯಾಗಿರುವ ಹಾಗೂ ಇತಿಹಾಸ ಸಂಬಂಧಿತ ನಾಮಗಳನ್ನು ಗುರುತಿಸಲಾಗಿದೆ.

ಶಾಸನಗಳಲ್ಲಿ ಉಲ್ಲೇಖವಾಗಿರುವ ಸ್ಥಳನಾಮಗಳನ್ನು ಅಧ್ಯಯನಕ್ಕೆ ಒಳಪಡಿಸಿ ಅವುಗಳ ಹಿನ್ನೆಲೆಯನ್ನು ವಿಶ್ಲೇಷಿಸಲಾಗಿದೆ ಮತ್ತು ಭಾಷಿಕ ಬದಲಾವಣೆಯನ್ನು ಗುರುತಿಸಲಾಗಿದೆ.

ಸಾಪೇಕ್ಷ ಸ್ಥಳನಾಮಗಳ ವಿಶ್ಲೇಷಣೆಯನ್ನು ಅಧ್ಯಯನವು ಒಳಗೊಂಡಿದೆ, ಚಿಕ್ಕ-ಹಿರೆ, ಮೇಲಿನ-ಕೆಳಗಿನ ಮುಂತಾದ ವಿಶೇಷಣಗಳನ್ನು ಒಳಗೊಂಡಿರುವ ಸ್ಥಳನಾಮಗಳನ್ನು ವಿಶೇಷವಾಗಿ ಕಂಡಿದ್ದು ವಿಶ್ಲೇಷಣೆ ಮಾಡಲಾಗಿದೆ.

ವರ್ಣ ಸೂಚಕ ಸ್ಥಳನಾಮಗಳನ್ನು ಅಧ್ಯಯನ ಮಾಡಲಾಗಿ ಅವು ವಿಶೇಷಣಗಳನ್ನು ಸೂಚಿಸುತ್ತವೆ. ಅವು ವಸ್ತುಗಳಿಗೆ ಸೇರಿಕೊಂಡು ಬಿಳಿ, ಕಂದು ಎನ್ನುವ ಸ್ಥಳನಾಮಗಳು ವ್ಯಾಪ್ತಿಯಲ್ಲಿ ಬರುತ್ತವೆ.

**ಅಧ್ಯಯನದ ಸಫಲತೆ ಹಾಗೂ ಮಿತಿಗಳು**

ಬೀಳಗಿ ತಾಲೂಕಿನ ಪರಿಸರದ ಸ್ಥಳನಾಮಗಳನ್ನು ನಿಗದಿತ ಅವಧಿಯಲ್ಲಿ ದತ್ತ ಸಂಗ್ರಹಿಸಿ ಮಿತಿಯಲ್ಲಿ ವರ್ಗೀಕರಣ ಮಾದರಿಗಳನ್ನು ಸಿದ್ಧಪಡಿಸಲಾಗಿದ್ದುದರ ಜೊತೆಗೆ ವಿಸ್ತೃತಗೊಳಿಸಲು ಇನ್ನೂ ಅವಕಾಶವಿರುವುದರಿಂದ ನನ್ನ ಮಿತಿಯಲ್ಲಿ ಅಧ್ಯಯನ ಮಾಡಲಾಗಿದೆ.

ಅಧ್ಯಯನದ ವ್ಯಾಪ್ತಿಯಲ್ಲಿ ಜನಪದ, ಕಥೆ, ಗಾದೆ, ಒಗಟು ಮುಂತಾದ ಮೌಖಿಕ ಪ್ರಕಾರಗಳನ್ನು ಗುರುತಿಸಲು ಸಾಧ್ಯವಿದ್ದು ಕೇವಲ ಐತಿಹ್ಯ ಕಥೆಗಳನ್ನು ಮೌಖಿಕ ಭೌಗೋಳಿಕ ಅಂಶಗಳಿಂದ ಗುರುತಿಸಲಾಗಿದೆ.

ಅಧ್ಯಯನಕ್ಕೆ ಕಂದಾಯ ಇಲಾಖೆಗೆ ಒಳಪಟ್ಟ ಪ್ರದೇಶಗಳನ್ನು ಆಯ್ದುಕೊಂಡಿದ್ದು ಅವುಗಳ ವಿಶ್ಲೇಷಣೆ ಮಾಡಲಾಗಿದೆ. ಗ್ರಾಮನಾಮಗಳು ಜೊತೆಗಿರುವ ಹಬ್ಬ-ಜಾತ್ರೆಗಳು ಮುಂತಾದವುಗಳನ್ನು ಆಧರಿಸಿ ಅಧ್ಯಯನ ಮಾಡಬಹುದಾಗಿದೆ.

ಈ ಪ್ರದೇಶದ ಸ್ಥಳನಾಮಗಳು ವಿಶೇಷವಾಗಿರುವುದರಿಂದ ಒಂದಕ್ಕೊಂದು ಭಿನ್ನವಾದ ವಾರ್ಗಿಕ ಮತ್ತು ವಿಶಿಷ್ಟ ಹೊಂದಿರುವುದರಿಂದ ಇವುಗಳ ವಿಶೇಷ ಅಧ್ಯಯನ ಮಾಡಿ ಸ್ಥಳನಾಮಕೋಶ ತಯಾರಿಸಲು ಅವಕಾಶವಿದೆ.

**ಅಧ್ಯಯನದ ಮುಂದಿನ ಸಾಧ್ಯತೆಗಳು**

ಬೀಳಗಿ ತಾಲೂಕು ಸ್ಥಳನಾಮಗಳು ಪ್ರತ್ಯೇಕ ಗ್ರಾಮವೊಂದರ ಒಳಗಿನ ಪ್ರದೇಶಗಳ ಹಾಗೂ ಸುತ್ತಮುತ್ತಲಿನ ಪ್ರದೇಶಗಳ ಅಧ್ಯಯನ ಮಾಡುವ ಅವಕಾಶವಿದೆ.

ಈ ಪರಿಸರದಲ್ಲಿ ಐತಿಹಾಸಿಕ ಪುರುಷರು, ಧಾರ್ಮಿಕರು, ಮಹಾನ್ ವ್ಯಕ್ತಿಗಳು ಆಗಿಹೋಗಿರುವುದರಿಂದಲೂ ದೇವಾಲಯಗಳಿಗೂ ಸ್ಥಳನಾಮಗಳಿಗಿರುವ ಸಹಸಂಬಂಧದ ಅಧ್ಯಯನ ಕೈಗೊಳ್ಳಲು ಸಾಧ್ಯತೆಯಿದೆ.

ಶಾಸನೋಕ್ತ ಸ್ಥಳನಾಮಗಳು ಐತಿಹಾಸಿಕ ವಿವರ ನೀಡುವ ಸ್ಥಳನಾಮಗಳನ್ನು ಸೂಕ್ಷ್ಮ ಅಧ್ಯಯನಕ್ಕೆ ಒಳಪಡಿಸಿದರೆ ಹೊಸ ಹೊಸ ಹೊಳಹುಗಳು ಬರುವ ಸಾಧ್ಯತೆ ಇದೆ.

ಸರಕಾರದ ಯೋಜನೆಗೆ ಒಳಪಟ್ಟ ಪ್ರದೇಶ ಇರುವುದರಿಂದ ಈಗಿರುವ ಪರಿಸರ ಮತ್ತು ಆಗಿಹೋಗಿರುವ ಪರಿಸರವನ್ನು ಸ್ಥಳನಾಮ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲು ಅವಕಾಶವಿದೆ.

***

## ಅಡಿಟಿಪ್ಪಣಿಗಳು

೧. ಕೆಮ್ತೂರು ರಘುಪತಿ ಭಟ್ಟ, ಹೆಸರಿನಲ್ಲೇನಿದೆ? ಪು.೨

೨. ಅರ್ಕಾವತಿ, ಸಂಪಾದಿತ ಕೃತಿ, ಕಸಾಪ ಪ್ರಕಟಣೆ, ಪು.೬೧

೩. ಸಾಂಸ್ಕೃತಿಕ ಪರಂಪರೆ, (ಲೇಖನ) ಸಾಮರಸ್ಯ, ಡಾ. ಬಿ.ಆರ್.ಹಿರೇಮಠ

೪. ಎಸ್.ಐ.ಐ.(ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್) XV ನಂ.೨೦೬

೫. ಎಸ್.ಐ.ಐ.(ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್) XV

೬. ಶಂಬಾ ಜೋಶಿ, ಎ.ಹೆ.ಕಂನಾಡಕತೆ, ಸಂ.೨, ಪು.೧೮೦

೭. ಕೆಮ್ತೂರು ರಘುಪತಿ ಭಟ್ಟ, ತುಳುನಾಡಿನ ಸ್ಥಳನಾಮಗಳು, ಪು.೨

೮. ದೇ. ಜವರೇಗೌಡ, ಸ್ಥಳನಾಮ ವ್ಯಾಸಂಗ, ಪು.೨೩

೯. ಶಂಬಾ ಜೋಶಿ, ಎ.ಹೆಂ.ಕಂನಾಡಕತೆ (ಕ್ಯಾತರು)

೧೦. ಶಂಬಾ ಜೋಶಿ, ಎ.ಹೆಂ.ಕಂನಾಡಕತೆ (ಕೋಲರು, ಮುಂಡಗರು)

೧೧. ಡಾ. ಎಂ.ಎಂ.ಕಲ್ಬುರ್ಗಿ, ಮಾರ್ಗ–೩ (ಗಿ, ತಿ, ಕಿ ವಾರ್ಗಿಕಗಳು)

೧೨. ಶಂಬಾ ಜೋಶಿ, ಎ.ಹೆಂ.ಕಂನಾಡಕತೆ, ಸಂ.೨, ಪು.೧೬೦

೧೩. ಡಾ. ಸೋಮಶೇಖರಗೌಡ, ಭಾಷೆ ರಚನೆ ಮತ್ತು ಬಳಕೆ

## ಗ್ರಂಥಋಣ


೧. ಕಲಬುರ್ಗಿ ಎಂ.ಎಂ. ಕನ್ನಡ ನಾಮವಿಜ್ಞಾನ ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ-೧೯೮೯

೨. ಕರ್ನಾಟಕ ಗ್ರಾಮಸೂಚಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ೧೯೮೫

೩. ಕೃಷ್ಣಭಟ್ ಸೇಡಿಯಾಪು, ಕೆಲವು ದೇಶನಾಮಗಳು ಸಾಹಿತ್ಯ ಸಂಘ ಮಣಿಪಾಲ ೧೯೭೫

೪. ಚಿದಾನಂದ ಮೂರ್ತಿ ಎಂ. ವಾಗರ್ಥ, ಬಾಪ್ಕೊ ಪ್ರಕಾಶನ ಬೆಂಗಳೂರು ೧೯೮೧

೫. ಚಿದಾನಂದ ಮೂರ್ತಿ ಎಂ. ಭಾಷಾವಿಜ್ಞಾನದ ಮೂಲ ತತ್ವಗಳು, ಡಿ.ವಿ.ಕೆ. ಮೂರ್ತಿ ಪ್ರಕಾಶನ ಮೈಸೂರು ೧೯೮೬

೬. ನಾರಾಯಣ ಕೆ.ವಿ. (ಸಂ) ಭಾಷೆ ವಿಶ್ವಕೋಶ-೧, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೦

೭. ನಾರಾಯಣ ಕೆ.ವಿ. ಸ್ಥಳನಾಮಗಳು-ಪರಿವರ್ತನೆ ಮತ್ತು ಪ್ರಭಾವ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯

೮. ರಘುಪತಿ ಭಟ್ ಎಂ. ಕೆಮ್ತೂರು, ತುಳುನಾಡಿನ ಸ್ಥಳನಾಮಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೮೧

೯. ರಘುಪತಿ ಭಟ್ ಎಂ. ಕೆಮ್ತೂರು, ಹೆಸರಿನಲ್ಲೇನಿದೆ? ಚೇತನಾ ಪ್ರಿಂಟರ್ಸ್ ಬೆಂಗಳೂರು ೧೯೮೯.

೧೦. ರಮೇಶ ಬೇ.ಗೋ., ಜನಪ್ರಿಯ ಮುನ್ನೂರು ಸ್ಥಳನಾಮಗಳು, ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು ೧೯೯೫

೧೧. ವಿಶ್ವನಾಥ, ಸ್ಥಳನಾಮಗಳು, ಸಂವಹನ ಪ್ರಕಾಶನ, ಮೈಸೂರು ೧೯೯೫

೧೨. ವಿಶ್ವನಾಥ. ಕೆ, ಸ್ಥಳನಾಮಗಳ ಸಾಂಸ್ಕೃತಿಕ ಪರಿವೇಷ, ದೇವಿ ಪ್ರಕಾಶನ, ಮೈಸೂರು ೨೦೦೦

೧೩. ಶಂ.ಬಾ.ಜೋಶಿ, ಎಡೆಗಳು ಹೇಳುವ ಕಂನಾಡ ಕಥೆ (ಶಂ.ಬಾ. ಕೃತಿ ಸಂಪುಟಗಳು), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೪. ಶಂ.ಬಾ.ಜೋಶಿ, ಕಂನುಡಿಯ ಜೀವಾಳ (ಶಂ.ಬಾ. ಸಮಗ್ರ ಸಂಪುಟ) ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೧೫. ಜಾಜಿ ದೇವೇಂದ್ರಪ್ಪ, ಆಂಧ್ರ-ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳು (ಪಿ.ಎಚ್.ಡಿ. ಪ್ರಬಂಧ)

೧೬. ರಾಜಶೇಖರ ಎಸ್. ಸಾಮಾಜಿಕ ಸಂಶೋಧನೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ೧೯೭೪

೧೭. ಸಂಗಮೇಶ ಸೌದತ್ತಿಮಠ, ಕನ್ನಡ ಭಾಷಾ ವ್ಯಾಸಂಗ, ರೂಪರಶ್ಮಿ ಪ್ರಕಾಶನ, ೧೯೯೩

೧೮. ಎಂ. ಚಿದಾನಂದ ಮೂರ್ತಿ, ಸಂಶೋಧನೆ, ಡಿ.ವಿ.ಕೆ. ಪ್ರಕಾಶನ, ಮೈಸೂರು ೨೦೦೨

೧೯. ಚಂದ್ರಶೇಖರ ಬಿ.ಎಸ್. ಸಮಾಜವಿಜ್ಞಾನಗಳಲ್ಲಿ ಸಂಶೋಧನಾ ವಿಧಾನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೧

೨೦. ದೇ. ಜವರೇಗೌಡ, ೧೯೯೦, ಸ್ಥಳನಾಮ ವ್ಯಾಸಂಗ, ಸಹ್ಯಾದ್ರಿ ಪ್ರಕಾಶನ

೨೧. ನಾರಾಯಣ ಕೆ.ವಿ.(ಸಂ.) ವ್ಯಕ್ತಿನಾಮಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೨. ಎಂ.ಎಂ. ಕಲಬುರ್ಗಿ ಕರ್ನಾಟಕದ ಕೈಫಿಯತ್ತುಗಳು ಕ.ವಿ.ವಿ. ಹಂಪಿ ೧೯೯೪

೨೩. ಕರ್ನಾಟಕ ರಾಜ್ಯ ಗೆಜೆಟಿಯರ್ ಸರ್ಕಾರಿ ಮುದ್ರಣಾಲಯ ಪ್ರಕಟಣೆ

೨೪. ಎಂ.ಎಂ. ಕಲಬುರ್ಗಿ ಹೊಸತು-ಹೊಸತು, ಕ.ವಿ.ವಿ. ಹಂಪಿ

೨೫. ನಟರಾಜ ಡಿ.ಕೆ., ೨೦೦೮, ಬೆಂಗಳೂರು ಗ್ರಾಮಾಂತರ ಜಿಲ್ಲೆ ಸ್ಥಳನಾಮಗಳು (ಪಿ.ಎಚ್.ಡಿ ಪ್ರಬಂಧ)

೨೬. ಸಾಮರಸ್ಯ, ಸತ್ಯಾನಂದ ಪಾತ್ರೋಟ(ಸಂ.), ಬಾಪೂಜಿ ಪ್ರಕಾಶನ, ಬೀಳಗಿ

೨೭. ಕೆನೆಮೊಸರು, ವೀರೇಂದ್ರ ಶೀಲವಂತ(ಸಂ.), ಬೀಳಗಿ

## ನಿಘಂಟುಗಳು

೧. ಕಿಟೆಲ್ ಕನ್ನಡ-ಇಂಗ್ಲೀಶ್ ಪದಕೋಶ, ನಾಲ್ಕು ಸಂಪುಟಗಳು

೨. ಕನ್ನಡ-ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೩. ಕನ್ನಡ-ಕನ್ನಡ-ಇಂಗ್ಲೀಶ್ ನಿಘಂಟು, ಚೆನ್ನೈ

೪. ವೆಂಕಟಸುಬ್ಬಯ್ಯ ಜಿ. ಇಗೋ ಕನ್ನಡ, ಭಾಗ-೧,೨

೫. ಎನ್. ಬಸವರಾಧ್ಯ, ಹಳಗನ್ನಡ ಶಬ್ದಾರ್ಥಕೋಶ ಡಿ.ವಿ.ಕೆ. ಪ್ರಕಾಶನ, ಮೈಸೂರು

೬. ಶಿವರಾಮಕಾರಂತ, ಸಿರಿಗನ್ನಡ ಅರ್ಥಕೋಶ, ಹರ್ಷ ಪ್ರಕಟನಾಲಯ, ಪುತ್ತೂರು ೧೯೩೧

## ಶಾಸನ ಸಂಪುಟಗಳು

೧. ಬಾಗಲಕೋಟೆ ಜಿಲ್ಲೆಯ ಶಾಸನಗಳು, ಕ.ವಿ.ಹಂಪಿ

೨. ಮುಳುಗಡೆಯಾಗಿರುವ ಗ್ರಾಮಗಳಲ್ಲಿನ ಶಾಸನಗಳು, ದೇವರಕೊಂಡಾರೆಡ್ಡಿ, ಕ.ವಿ.ಹಂಪಿ

೩. South Indian Inscription XV (SII)

*ಅನುಬಂಧ-೨*

## ಬೀಳಗಿ ತಾಲೂಕಿನ ಸ್ಥಳನಾಮಗಳು

೧) ಅನಗವಾಡಿ
೨) ಅಮಲಝುರಿ
೩) ಅರಕೇರಿ
೪) ಆಲಗುಂಡಿ
೫) ಕಡಪಟ್ಟಿ
೬) ಕಮದಾಳ
೭) ಕಾತರಕಿ
೮) ಕುಂದರಗಿ
೯) ಕೊಪ್ಪ (ಸಮತ್ ಕಾತರಕಿ)ಎಸ್.ಕೆ
೧೦) ಕೊಪ್ಪ ಎಸ್.ಆರ್ (ಸಮ್ಮತ್ ರೊಳ್ಳಿ)
೧೧) ಕೊಂತಿಕೊಲ್ಲ
೧೨) ಕೋರ್ತಿ
೧೩) ಕೋಲೂರು
೧೪) ಕೋವಳ್ಳಿ
೧೫) ಗರಡದಿನ್ನಿ
೧೬) ಗಲಗಲಿ
೧೭) ಗಿರಿಗಾವ
೧೮) ಗಿರಿಸಾಗರ
೧೯) ಗುಡದಿನ್ನಿ
೨೦) ಗಳಬಾಳ
೨೧) ಗುಂಡನಪಲ್ಲೆ
೨೨) ಗೋಡಿಹಾಳ
೨೩) ಗೋವಿನದಿನ್ನಿ
೨೪) ಚಿಕ್ಕ ಹಂಚಿನಾಳ
೨೫) ಚಿನವಾಲರಕೊಪ್ಪ
೨೬) ಚೌಡಾಪುರ
೨೭) ಜಾಣಮಟ್ಟಿ
೨೮) ಟಕ್ಕಳಕಿ
೨೯) ತಿಮ್ಮಾಪುರ (ಸಮ್ಮತ್ ರೊಳ್ಳಿ)
೩೦) ತಮ್ಮರಮಟ್ಟಿ
೩೧) ತೆಗ್ಗಿ
೩೨) ತೋಳಮಟ್ಟಿ
೩೩) ಧವಳೇಶ್ವರ
೩೪) ನಾಗರಾಳ
೩೫) ಬಳ್ಳೂರು
೩೬) ಬಾಡಿಗಂಡಿ
೩೭) ಬಾಡಗಿ
೩೮) ಬಾದರದಿನ್ನಿ
೩೯) ಬಾವಲತ್ತಿ
೪೦) ಬಸನಾಳ
೪೧) ಬೀರಕಟ್ಟಿ
೪೨) ಬೀಳಗಿ
೪೩) ಬೂದಿಹಾಳ ಎಸ್.ಜಿ
೪೪) ಬೂದಿಹಾಳ ಎಸ್.ಎಚ್
೪೫) ಮನ್ನಿಕೇರಿ
೪೬) ಮಾನಗೂರ
೪೭) ಮುತ್ತಲದಿನ್ನಿ
೪೮) ಯಡಹಳ್ಳಿ
೪೯) ಯತ್ನಟ್ಟಿ
೫೦) ಯಳ್ಳಿಗುತ್ತಿ
೫೧) ರಬಕವಿ
೫೨) ರೊಳ್ಳಿ
೫೩) ಲಿಂಗಾಪುರ ಎಸ್.ಕೆ
೫೪) ಲಿಂಗಾಪೂರ ಎಸ್.ಎಚ್
೫೫) ಶಿರಗುಪ್ಪಿ
೫೬) ಚಿಕ್ಕ ಸಂಗಮ
೫೭) ಸಿದ್ದಾಪುರ
೫೮) ಸುನಗ
೫೯) ಸೊನ್ನ
೬೦) ಹದ್ರಿಹಾಳ
೬೧) ಹಂಚಿನಾಳ (ಇನಾಮು)
೬೨) ಹೆಗ್ಗೂರು
೬೩) ಹೆರಕಲ್ಲ
೬೪) ಹೊನ್ನಿಹಾಳ

# ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ

**ಸಂಶೋಧನಾ ವಿದ್ಯಾರ್ಥಿ:**
*ಮಲ್ಲಿಕಾರ್ಜುನ ಹಿರೇಮಠ*
**ಕನ್ನಡ ಭಾಷಾಧ್ಯಾಯನ ವಿಭಾಗ**

**ಮಾರ್ಗದರ್ಶಕರು:**
*ಡಾ. ಸಾಂಬಮೂರ್ತಿ*
**ಕನ್ನಡ ಭಾಷಾಧ್ಯಾಯನ ವಿಭಾಗ**

**ಸಂಶೋಧನಾ ವಿಷಯ:** ಬೀಳಗಿ ತಾಲೂಕಿನ ಸ್ಥಳನಾಮಾಧ್ಯಯನ.

**ಪ್ರಶ್ನಾವಳಿಗೆ ಕಾರಣಗಳು:** ಸ್ಥಳನಾಮಗಳ ಅಧ್ಯಯನ ಮಾಡಲು ಸಹಾಯಕವಾಗುವಂತೆ ಕ್ಷೇತ್ರ ಕಾರ್ಯದಲ್ಲಿ ಪ್ರಶ್ನಾವಳಿಯ ವಿಧಾನವನ್ನು ಅನುಸರಿಸಲಾಗಿದೆ.

**ಕ್ಷೇತ್ರ ಕಾರ್ಯಮಾಡಿದ ದಿನಾಂಕ** :

**ಮಾಹಿತಿದಾರರ ಹೆಸರು ಮತ್ತು ಸಹಿ** :

**ಸಂಶೋಧನಾ ವಿದ್ಯಾರ್ಥಿಯ ಸಹಿ** :

**-: ಪ್ರಶ್ನಾವಳಿ :-**

1. ಊರಿನ ಹೆಸರು :
2. ಊರಿನ ಅಧಿಕೃತ ಹೆಸರು (ಬರವಣಿಗೆಯ ರೂಪ) :
3. ಉಚ್ಚಾರಣೆಯಲ್ಲಿರುವ ಇತರ ರೂಪಗಳು :
4. ಹೃಸ್ವ ರೂಪಗಳು :
5. ಹಳೆಯ ಹೆಸರುಗಳು :
6. ಊರಿನ ಅಧಿದೇವತೆ :
7. ಪ್ರಾಕೃತಿಕ ಪರಿಸರ (ನದಿ, ಕೆರೆ, ದೇವಸ್ಥಾನ, ಕೋಟೆ, ಕಣಿವೆ, ಬೆಟ್ಟ, ಮುಖ್ಯ ಬೆಳೆ) :
8. ಊರಿನ ಪ್ರಮುಖ ಹಬ್ಬಗಳು :
9. ಊರಿನ ಹೆಸರಿನೊಡನೆ ಬೆರೆತ ಗಾದೆ,. ಒಗಟು, ನಾಣ್ಣುಡಿ, ಲಾವಣಿಗಳಿದ್ದಲ್ಲಿ ಅವುಗಳ ವಿವರ :
10. ಊರಿಗೆ ಸಂಬಂಧಿಸಿದ ಇತಿಹಾಸ :
11. ಊರಿಗೆ ಆ ಹೆಸರು ಬಂದಿದ್ದಕ್ಕೆ ಇರುವ ಕಥೆಗಳು:
12. ಇತರೆ ಮಾಹಿತಿಗಳು :

*ಅನುಬಂಧ-3*

## ವಕ್ತೃಗಳ ವಿವರ

| ಹೆಸರು | ಊರು | ವಯಸ್ಸು | ವೃತ್ತಿ |
|---|---|---|---|
| ಪ್ರೊ. ಬಿ.ಕೆ. ಹಿರೇಮಠ | ಅಮಲಝರಿ | 45 | ಉಪನ್ಯಾಸಕ |
| ಸಂಗಪ್ಪ ಕಾತರಕಿ | ಆಲಗುಂಡಿ | 70 | ಒಕ್ಕಲುತನ |
| ಎಸ್.ಎಸ್. ಪಾಟೀಲ್ | ಕಂದಗಲ್ಲ | 38 | ಶಿಕ್ಷಕರು |
| ಡಾ.ಹರೀಶ್ ಕನಕನ್ನವರ | ಕಾತರಕಿ | 45 | ವೈದ್ಯ |
| ಶಾಂತೇಶ ಕಮತರ | ಕುಂದರಗಿ | 34 | ಅಬಕಾರಿ ಅಧಿಕಾರಿ |
| ಭೀಮನಗೌಡ ಪಾಟೀಲ | ಕೊಪ್ಪ | 60 | ಕೃಷಿಕ |
| ಸುಭಾಸಗೌಡ ಪಾಟೀಲ | ಕೋರ್ತಿ | 75 | ಒಕ್ಕಲುತನ |
| ಡಿ.ಎಂ.ಚಲವಾದಿ | ಕೊಂತಿಕಲ್ಲ | 45 | ಪ್ರಾಧ್ಯಾಪಕ |
| ಅಮೀನ್‌ಸಾಬ್ ಗಲಗಲಿ | ಕೋಲೂರು | 58 | ಶಿಕ್ಷಕರು |
| ಅಶೋಕ ಕೆಂಬಾವಿ | ಮುಂಡಗನೂರು | 40 | ಶಿಕ್ಷಕರು |
| ಗುರುಪಾದಯ್ಯ ಹಿರೇಮಠ | ಕೋವಳ್ಳಿ | 68 | ಒಕ್ಕಲುತನ |
| ಭೀಮನಗೌಡ ಪಾಟೀಲ | ಗರಡದಿನ್ನಿ | 69 | ಒಕ್ಕಲುತನ |
| ಅಶೋಕ ಗಾಣಿಗೇರ | ಗಲಗಲಿ | 60 | ಒಕ್ಕಲುತನ |
| ಅಶೋಕ ಲೆಂಕೆಣ್ಣವರ | ಗಿರಿಗಾವಿ | 55 | ಒಕ್ಕಲುತನ |
| ರುದ್ರಮುನಿ ಶಿವಾಚಾರ್ಯ | ಗಿರಿಸಾಗರ | 45 | ಮಠಾಧೀಶರು |
| ಹನುಮಂತಪ್ಪ ವಾಲಿ | ಗುಡದಿನ್ನಿ | 50 | ಒಕ್ಕಲುತನ |
| ಗುರುರಾಜ ಕುಂದರಗಿ | ಗುಂಡನಪಲ್ಲೆ | 40 | ಬ್ಯಾಂಕ್‌ಉದ್ಯೋಗಿ |
| ಎನ್.ಎಚ್. ಗೂಡೂರ | ಗೋವಿನದಿನ್ನೆ | 60 | ವ್ಯಾಪಾರಿ |
| ಗುಂಡಪ್ಪ ಕುಂಬಾರ | ಹಂಚಿನಾಳ | 60 | ಒಕ್ಕಲುತನ |
| ಬಸವರಾಜ | ಜಾನಮಟ್ಟಿ | 50 | ಒಕ್ಕಲುತನ |
| ಶ್ರೀಶೈಲ ಉಗ್ರಾಣ | ಟಕ್ಕಳಕಿ | 40 | ಪದವೀಧರ |
| ಮುತ್ತಪ್ಪ ಹ.ಕುಂಬಾರ | ತೋಳಮಟ್ಟಿ | 50 | ಒಕ್ಕಲುತನ |
| ಶಂಕರಗೌಡ ಪಾಟೀಲ | ಢವಳೇಶ್ವರ | 90 | ಹಿರಿಯರು |
| ಸಹಜಾನಂದ ಕೆಂಗಲಗುತ್ತಿ | ನಾಗರಾಳ | 34 | ಪ್ರಾಧ್ಯಾಪಕ |
| ಮಲ್ಲಪ್ಪ ಗಾಣಿಗೇರ | ಬಳ್ಳೂರು | 65 | ನಿವೃತ್ತ ಶಿಕ್ಷಕರು |
| ಎನ್.ಬಿ. ಪಾಟೀಲ | ಬಾಡಗಂಡಿ | 42 | ಒಕ್ಕಲುತನ |
| ಮಾಗುಂಡಪ್ಪ ಕಲಬುರ್ಗಿ | ಬಾದರದಿನ್ನಿ | 52 | ಒಕ್ಕಲುತನ |
| ವೆಂಕನಗೌಡ ಪಾಟೀಲ | ಬಾವಲತ್ತಿ | 45 | ಒಕ್ಕಲುತನ |
| ಶಿವಲಿಂಗಯ್ಯ ಹಿರೇಮಠ | ಬಿಸನಾಳ | 70 | ವೈದಿಕತನ |
| ಸಿದ್ದಪ್ಪ ಬಿದರಿ | ಬೀಳಗಿ | 56 | ವರಕವಿ-ಒಕ್ಕಲುತನ |
| ಚಂದ್ರಶೇಖರಗೌಡ ಅಪ್ಪಾಜಿಗಳು | ಬೂದಿಹಾಳ ಎಸ್.ಜಿ | 75 | ಒಕ್ಕಲುತನ |
| ಹನುಮಂತಪ್ಪ ಹುಡೇದ | ಮನ್ನಿಕೇರಿ | 60 | ಒಕ್ಕಲುತನ |
| ಮುರಗಯ್ಯ ಹಿರೇಮಠ | ಯಡಹಳ್ಳಿ | 50 | ಒಕ್ಕಲುತನ |
| ಶಿವಾನಂದ ನಿಂಗನೂರ | ರೊಳ್ಳಿ | 56 | ಊರಿನ ಹಿರಿಯರು |
| ಎಸ್.ಆರ್. ಅಂಟಿನ | ಸಿದ್ದಾಪುರ | 75 | ನಿವೃತ್ತ ಶಿಕ್ಷಕರು |
| ಶ್ರೀಕಾಂತ ಹೂಲಗೇರಿ | ಸೊನ್ನ | 60 | ಒಕ್ಕಲುತನ |
| ಡಾ. ಎ.ಎಮ್.ಸತ್ಯನಾಯ್ಕ | ಹೆರಕಲ್ಲು | 45 | ಪ್ರಾಧ್ಯಾಪಕರು |
| ಶಿವಲಿಂಗಯ್ಯ ಹಿರೇಮಠ | ಹೊನ್ನಿಹಾಳ | 40 | ಒಕ್ಕಲುತನ |

